

# ಚಂದಮಾಮ

## ಓದುಗರಲ್ಲಿ ವಿನಂತಿ

'ಚಂದಮಾಮ'ವನ್ನು ಸದಾ ಆಕರ್ಷಣೀಯವಾಗಿ, ಆಸಕ್ತಿದಾಯಕವಾಗಿ ರೂಪಿಸಲು ಮತ್ತು ಅದರ ಬೆಲೆ ಎಲ್ಲರಿಗೂ ಎಟಕುವಂತಿರಲು ನಾವು ಮಾಡುತ್ತಿರುವ ಪ್ರಯತ್ನ ನಮ್ಮ ಓದುಗರೆಲ್ಲರಿಗೂ ತಿಳಿದದ್ದೇ. ಈ ನಿರ್ವಹಣೆಯಲ್ಲಿ ನಾವು ವಿವಿಧ ಕ್ಲಿಷ್ಟ ಸಮಸ್ಯೆಗಳನ್ನು ಎದುರಿಸಬೇಕಾಗಿ, ಭಾರವನ್ನು ಹೊರಬೇಕಾಗಿ ಬಂದಾಗ್ಯೂ, ನಮ್ಮ ಹೊರೆಯ ಯಾವ ಭಾಗವಾಗಲೀ ಸಾಧ್ಯವಾದಷ್ಟುಮಟ್ಟಿಗೆ ಓದುಗರ ಮೇಲೆ ಬೀಳದಂತೆ ಜಾಗ್ರತೆ ಪಡುತ್ತ ಬಂದಿದ್ದೇವೆ.

ಆದರೆ ಕೆಲವು ವೇಳೆ ಅದೇ ರೀತಿ ಮುಂದುವರೆಯುವುದು ಕಷ್ಟ ಸಾಧ್ಯ. ಹಾಗೆ ಮುಂದುವರಿಯದಂಥಹ ಪರಿಸ್ಥಿತಿ ಈಗ ಒದಗಿದೆ. 'ಚಂದಮಾಮ' ಪ್ರಕಾಶನಕ್ಕೆ ಬೇಕಾದ ಎಲ್ಲಾ ವಸ್ತುಗಳ ಬೆಲೆಗಳೂ ಹೆಚ್ಚಿವೆ. ಮುಖ್ಯವಾಗಿ ಆಗಿಂದಾಗ್ಗೆ ಹೆಚ್ಚುತ್ತಿರುವ ಮುದ್ರಣ ಕಾಗದದ ಬೆಲೆಯಿಂದಾಗಿ ನಾವು ಹೊರಬೇಕಾಗಿ ಬರುತ್ತಿರುವ ಭಾರ ಅಪಾರ. ಜೊತೆಗೆ ಈ ವರ್ಷದ ಬಡ್ಜೆಟ್ಟಿನ ಪ್ರಕಾರ ಪತ್ರಿಕೆಗಳು ಕಾಗದದ ಬೆಲೆಯ ಮೇಲೆ ಕಸ್ಟಮ್ಸ್ ಸುಂಕವನ್ನು ಕೂಡಾ ತೆರಬೇಕಾಗಿ ಬಂದಿರುವ ಕಾರಣ, ಈಗಿನ ಬೆಲೆಗೆ ಪತ್ರಿಕೆಗಳನ್ನು ಒದಗಿಸುವುದು ಅಸಾಧ್ಯ. ಆದ್ದರಿಂದ ಜುಲೈ ೮೧ರ ಸಂಚಿಕೆಯಿಂದ 'ಚಂದಮಾಮ'ದ ಬೆಲೆಯನ್ನು ೨೫ ಪೈಸೆಗಳಷ್ಟು ಹೆಚ್ಚಿಸಬೇಕಾಗಿ ಬಂದಿದೆ. ಜುಲೈ ೮೧ ರಿಂದ ಬಿಡಿ ಪ್ರತಿ ಬೆಲೆ ರೂ. ೧–೭೫. ವಾರ್ಷಿಕ ಚಂದಾ ರೂ. ೨೧.

ಸಹೃದಯಿಗಳಾದ ನಮ್ಮ ಪಾಠಕರು ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು, ಎಂದಿನಂತೆ ನಮಗೆ ಆದರಾಭಿಮಾನಗಳನ್ನು ತೋರುವರೆಂದು ನಂಬಿ, ನಾವೂ ಓದುಗರಿಗೆ ಮತ್ತಷ್ಟು ಸಂತೃಪ್ತಿ ದೊರಕುವಂತೆ ಪತ್ರಿಕೆಯನ್ನು ರೂಪಿಸುವ ಪ್ರಯತ್ನ ಮಾಡುವೆವೆಂದು ವಿಜ್ಞಾಪಿಸಲಿಚ್ಛಿಸುತ್ತೇವೆ.

—ಪ್ರಕಾಶಕರು



# ಚಂದಮಾಮ

ಜೂನ್ 1981



ಈ ಸಂಚಿಕೆಯಲ್ಲಿ






ಬಿಡಿ ಪ್ರತಿ ರೂ. ೧-೫೦

ವಾರ್ಷಿಕ ಚಂದಾ ರೂ. ೧೮-೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

ಯುದ್ಧವೂ ಯುದ್ಧವರ್ಣನೆಗಳೂ ಚಿತ್ರದಲ್ಲಿ ನೋಡಲಿಕ್ಕೂ, ಕಿವಿಗಳಿಂದ ಕೇಳಲಿಕ್ಕೂ ಪ್ರಜೆಗಳಿಗೆ ಪ್ರಿಯವಿದ್ದೀತೇ ಹೊರತು, ತಮ್ಮ ಮೇಲೆಯೇ ಯುದ್ಧವು ಬಂದು ಬೀಳುವುದನ್ನು ಯಾವ ಪ್ರಜೆಗಳೂ ಇಷ್ಟಪಡಲಾರರು. ಸಾಧಾರಣವಾಗಿ ಪ್ರಜೆಗಳು ಶಾಂತಿಯನ್ನೇ ಆಶಿಸುವರೆಂಬುದನ್ನು ಅರಿತಿದ್ದ ಒಬ್ಬ ರಾಜನು ಹೇಗೆ ಯುದ್ಧ ಸಂದರ್ಭವನ್ನು ತೊಲಗಿಸಿದನೆಂಬುದನ್ನು ಈ ಸಂಚಿಕೆಯು "ರಾಜರಕಲಹ" ಎಂಬ ಕಥೆ ನಿರೂಪಿಸುತ್ತದೆ.

## ಅಮರವಾಣಿ

ಅಂಕಾಧಿರೋಪಿತ ಮೃಗಶ್ಚಂದ್ರಮಾ ಮೃಗಲಾಂಛನಃ
ಕೇಸರೀ ನಖ ನಿರ್ಭಿನ್ನ ಮೃಗಯೂಥೋ ಮೃಗಾಧಿಪಃ

ಬುದ್ಧಿಯ ಮಾರ್ದವತೆಯಿಂದ ಜಿಂಕೆಯೊಡಗೂಡಿದ ಚಂದ್ರನಿಗೆ ಮೃಗಲಾಂಛನನೆಂಬ ಸಣ್ಣ ಹೆಸರಾದರೆ, ತನ್ನ ಹರಿತವಾದ ನಖಗಳಿಂದ ಮೃಗಗಳನ್ನು ಸೀಳುವ ಸಿಂಹಕ್ಕೆ ಮೃಗರಾಜನೆಂಬ ದೊಡ್ಡ ಹೆಸರು ಬಂದುದು ಆಶ್ಚರ್ಯವೇ.

ಸಂಪುಟ : ೬೬ ಜೂನ್ '೮೧ ಸಂಚಿಕೆ : ೬

ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦




CHITRA





# ರಾಜಕಲಹ

ಹಿಂದಿನ ಒಂದು ಕಾಲದಲ್ಲಿ ಸುದರ್ಭವೆಂಬ ಒಂದು ದೇಶವಿತ್ತು. ಆ ದೇಶವನ್ನಾಳುವ ರಾಜನ ಕುಮಾರಿಯಾದ ಚಂಪಾವತಿ ತ್ರಿಲೋಕಸುಂದರಿ ಎಂದು ಹೆಸರು ಪಡೆದಿದ್ದಳು. ಅವಳ ಸೌಂದರ್ಯಕ್ಕೆ ಪರವಶರಾಗಿ, ಅವಳಿಗಾಗಿ ಪ್ರಯತ್ನ ಮಾಡುವ ಅನೇಕ ರಾಜವಂಶದವರೊಳಗೆ ಸುನಾಗ ದೇಶದ ರಾಜನಾದ ಜಯಚಂದ್ರನೂ ಒಬ್ಬನು. ಚಂಪಾವತಿಗೆ ಸ್ವಯಂವರವೆಂದು ಗೊತ್ತಾದ ಕೂಡಲೇ ಜಯಚಂದ್ರನು ಅತ್ಯುತ್ಸಾಹದಿಂದ ಸುದರ್ಭ ದೇಶಕ್ಕೆ ಹೊರಟು ಬಂದನು. ತುಂಬಾ ಸುಂದರಪುರುಷನೆಂದು ತನ್ನನ್ನು ನೋಡಿದವರು ಹೇಳುವುದನ್ನು ಕೇಳಿ ನಂಬುಗೆಯಿಂದ ಬಂದವನಿಗೆ ನಿರಾಶೆಯಾಗಿ ಹೋಯಿತು. ಸ್ವಯಂವರದಲ್ಲಿ ಚಂಪಾವತಿ ಪುನ್ನಾಗ ದೇಶದ ರಾಜನಾದ ಉದಯನ ಕೊರಳಿಗೆ ವರ ಮಾಲೆ ಹಾಕಿ ವರಿಸಿದಳು.

ಸುನಾಗ ಮತ್ತು ಪುನ್ನಾಗ ದೇಶಗಳು ನೆರೆಹೊರೆಯ ದೇಶಗಳಾಗಿದ್ದುವು. ಬಹಳ ಕಾಲದಿಂದ ಆ ಎರಡು ದೇಶಗಳಿಗೂ ದ್ವೇಷವು ಹೊಗೆಯಾಡಿಕೊಂಡಿತ್ತು. ಅದಕ್ಕೆ ಮುಖ್ಯ ಕಾರಣ ಜಯಚಂದ್ರನ ಅಸೂಯೆಯೇ. ಉದಯನು ತಾಳ್ಮೆಯುಳ್ಳ ಸಮರ್ಥನಾದ ರಾಜನಾಗಿದ್ದನು.

ಸ್ವಯಂವರವು ಹಾಗೆ ನಡೆದ ಕೂಡಲೇ ಜಯಚಂದ್ರನು ನಿರಾಶೆಯನ್ನು ಹತ್ತಿಕ್ಕಿಕೊಳ್ಳಲಾಗದೆ ಧುಸುಮುಸನೆ ಸಿಡಿಯ ತೊಡಗಿದನು. ಚಂಪಾವತಿ ಸಾರಾಸಾರ ವಿಚಾರವಿಲ್ಲದೆ ಯಾವುದಕ್ಕೂ ಪ್ರಯೋಜನವಿಲ್ಲದ ಅಸಮರ್ಥನನ್ನು ವರಿಸಿದುದನ್ನು ನೋಡಿ, ತನಗೆ ಬಹಳ ಸಂಕಟವಾಗಿದೆಯೆಂದು ಹತ್ತಿರದವರೊಡನೆ ಹೇಳಿದನು. ಇದು ಮೋಸದ ಸ್ವಯಂವರವೆಂದು ಜರೆದಾಡಿದನು. ಉಳಿದ ರಾಜಕುಮಾರರೂ ರಾಜರೂ ಈ ಮೋಸವನ್ನು ಸಹಿಸಕೂಡದೆಂದು ಹಾರಾಡಿದನು.

ಅವನ ಮಾತುಗಳನ್ನು ಕೇಳಿ ಉದಯನ ಪರಿವಾರದವರು ತುಂಬಾ ಆವೇಶಗೊಂಡರು. ಸುಮ್ಮನಿರದೆ, ಕೂಡಲೇ ಬಾಯಿಬಡಕ ಜಯಚಂದ್ರನಿಗೆ ಬುದ್ಧಿ ಕಲಿಸಬೇಕೆಂದರು. ಸ್ವಯಂವರಕ್ಕೆ ಬಂದ ಅನೇಕಮಂದಿ ರಾಜರು ಕೂಡಾ ಸ್ವಯಂವರ ಪದ್ಧತಿಗೆ ವಿರೋಧವಾಗಿ ಮಾತಾಡುವ ಜಯಚಂದ್ರನ ಪ್ರವರ್ತನೆಯನ್ನು ನಿಂದಿಸಿದರು.

ಆದರೂ ಉದಯನು ಮಾತ್ರ ಆವೇಶಪಡದೆ, "ಅಯ್ಯಾ, ಜಯಚಂದ್ರಾ, ನೀನು ಒಂದು ರಾಜ್ಯದ ಅಧಿಪತಿ. ನಿನ್ನಂಥವನು ಹೀಗೆ ಬಾಯಿ ಹಾರಿಸುವುದು ಚೆಂದಾಗಿಲ್ಲ. ಸಮರ್ಥನಾದವನು ತನ್ನ ಪ್ರತಾಪವನ್ನು ಮಾತಿನಲ್ಲಿ ತೋರಿಸದೆ ಕೃತಿಯಲ್ಲಿ ತೋರಿಸುತ್ತಾನೆ. ನಿನಗೆ ಇದೆಲ್ಲಾ ತಿಳಿಯದ್ದೇನಲ್ಲ. ನೆನಪು ಮಾಡಿದೆ ಅಷ್ಟೇ" ಎಂದನು.

ಈ ಮಾತುಗಳಿಗೆ ಅಲ್ಲಿದ್ದವರೆಲ್ಲಾ ನೆಗಾಡಿದರು. ದ್ವಂದ್ವಯುದ್ಧಕ್ಕಿಳಿದರೆ ಉದಯನನ್ನು ಸರಿಗಟ್ಟುವವರು ಇಲ್ಲವೆಂಬ ಖ್ಯಾತಿ ಇತ್ತು. ಆದುದರಿಂದ ಜಯಚಂದ್ರನು ಆಗ ಏನೂ ಮಾತಾಡದೆ, ತನ್ನ ರಾಜ್ಯಕ್ಕೆ ಹಿಂದಿರುಗಿ ಹೋಗಿ ಯುದ್ಧದ ಪ್ರಯತ್ನಕ್ಕೆ ತೊಡಗಿದನು.

ಈ ವಾರ್ತೆ ಚಾರರಮೂಲಕವಾಗಿ ಉದಯನಿಗೆ ಗೊತ್ತಾಯಿತು. ಉದಯನಿಗೆ ಸೈನಿಕರನ್ನು ಸಾಯಿಸುವಂತಹ ಯುದ್ಧದ ಮೇಲೆ ಇಷ್ಟವೇ ಇರಲಿಲ್ಲ. ಆದರೂ ತೀರಾ ಮೈಮೇಲೆ ಬಂದರೆ, ಎಂಬ ಅನುಮಾನದಲ್ಲಿ ತಾನೂ ಯುದ್ಧದ ಸಿದ್ಧತೆಗಳನ್ನು ಮಾಡತ್ತ, ಯುದ್ಧ ನಿವಾರಣೆಗೆ ಏನು ಮಾಡಬೇಕೆಂದು ಆಲೋಚಿಸಿಕೊಂಡೇ ಇದ್ದನು. ಮೊದಲು ಜಯಚಂದ್ರನಿಗೆ ರಾಯಭಾರವನ್ನು ಕಳುಹಿಸುವುದು ಒಳ್ಳೆಯದೆಂದು ಅವನಿಗೆ ತೋರಿತು. ಕೂಡಲೇ ಈ ರೀತಿಯಾಗಿ ರಾಯಭಾರಿಯ ಹತ್ತಿರ ಹೇಳಿ ಕಳುಹಿಸಿದನು :

"ಜಯಚಂದ್ರಾ, ಕಲಹ ಉಂಟಾದುದು ನಿನಗೂ ನನಗೂ ಮಧ್ಯದಲ್ಲಿ ಮಾತ್ರ. ಹಾಗಿರುವಾಗ ಎರಡು ದೇಶಗಳ ನಡುವೆ ಯುದ್ಧವನ್ನು ತಂದು ಹಾಕಿ ಸಾವಿರಾರು ಪಾಪದ ಪ್ರಜೆಗಳ ಸಾವಿಗೆ ಕಾರಣವಾಗುವುದು ನನಗೆ ಇಷ್ಟವಿಲ್ಲ. ಆದುದರಿಂದ ಯುದ್ಧ ಪ್ರಯತ್ನವನ್ನು ಬಿಡುವುದೇ ಒಳ್ಳೆಯದು."

ರಾಯಭಾರಿಯ ಮಾತನ್ನು ಕೇಳಿ ಜಯಚಂದ್ರನು ದೊಡ್ಡದನಿಯಿಂದ ನಕ್ಕು, ರಾಯಭಾರಿಯನ್ನು ಅವಮಾನಪಡಿಸಿದನು. ಜಯಚಂದ್ರನ ಮಂತ್ರಿ ಮಾತ್ರ "ಪ್ರಭೂ, ಉದಯನು ಅಂಜುಕುಳಿಯೇನಲ್ಲ.





ಅವನ ವ್ಯಕ್ತಿತ್ವವನ್ನು ನೀವೂ ಸ್ವಲ್ಪ ಆಲೋಚನೆ ಮಾಡಿ ನೋಡುವುದು ಒಳ್ಳೆಯದು. ನಮ್ಮ ಪ್ರಜೆಗಳು ಕೂಡಾ ಉದಯನನ್ನು ದ್ವೇಷಿಸುತ್ತಿರುವರಾದರೆ ನಾವು ಪುನ್ನಾಗ ದೇಶದ ಮೇಲೆ ಯುದ್ಧಕ್ಕೆ ಹೋಗೋಣ" ಎಂದನು.

"ಪ್ರಜೆಗಳಿಗೇನುಗೊತ್ತಿದೆ ಮಣ್ಣು" ಎಂದು ಜಯಚಂದ್ರನು ಮಂತ್ರಿಯ ಮಾತನ್ನು ತಾತ್ಸಾರ ಮಾಡಿದನು. ಹೀಗಿರುವಾಗ ಒಂದು ದಿನ ಜಯಚಂದ್ರನಿಗೆ ಚಂಪಾವತಿ ಬರೆದ ಒಂದು ರಹಸ್ಯ ಪತ್ರವನ್ನು ಒಬ್ಬನು ರಹಸ್ಯವಾಗಿ ತಂದು ಕೊಟ್ಟನು. "ಜಯಚಂದ್ರರೇ, ನಾನೀಗ ಪಶ್ಚಾತ್ತಾಪ ಪಡುತ್ತಿದ್ದೇನೆ. ಸ್ವಯಂವರದಲ್ಲಿ ಉದಯನನ್ನು ವರಿಸಿದುದು ತಪ್ಪಾಯಿತೆಂದು ಈಗ ತಿಳಿಯಿತು. ಆದರೂ ಕೈಮೀರಿ ಹೋದುದೇನೂ ಇಲ್ಲ. ಈಗ ಪುನ್ನಾಗ ದೇಶದ ರಾಣಿಯಾಗಿರುವ ನನಗೆ ಕೋಟೆಯೊಳಗಿನ ಆಯಕಟ್ಟುಗಳೆಲ್ಲಾ ಗೊತ್ತಾಗಿದೆ. ನೀವು ನನ್ನನ್ನು ರಾಣಿಯಾಗಿ ಸ್ವೀಕರಿಸಿಕೊಳ್ಳುವಿರಾದರೆ ನೀವು ಸುಲಭದಲ್ಲೇ ಪುನ್ನಾಗ ದೇಶದ ರಾಜರಾಗಿರಬಹುದು. ಇದೇ ಬರುವ ದಶಮಿಯ ದಿನ ನಾನು ವನವಿಹಾರದ ನೆವನದಲ್ಲಿ, ಸರಿಹದ್ದಿನ ಅಡವಿಯಲ್ಲಿ ನಿಮ್ಮನ್ನು ಕಾದಿರುತ್ತೇನೆ" ಎಂದು ಆ ಪತ್ರದಲ್ಲಿ ಬರೆಯಲಾಗಿತ್ತು.

ಮೂರ್ಖನಾದ ಜಯಚಂದ್ರನು ಆ ಕಾಗದವನ್ನು ಮಂತ್ರಿಗೆ ಕೂಡಾ ತೋರಿಸದೆ, ಸ್ವಲ್ಪ ಮಾತ್ರ ಪರಿವಾರದೊಂದಿಗೆ, ಸರಿಹದ್ದಿನ ಅಡವಿಗೆ ಹೋಗಿ ಅಲ್ಲಿ ಕಾದಿದ್ದ ಉದಯನ ಕೈಗೆ ಬಂದೀಯಾಗಿ ಸಿಕ್ಕಿಬಿದ್ದನು. ಉದಯನು ಜಯಚಂದ್ರನನ್ನು ಸಗೌರವದಿಂದ ಕರೆದುಕೊಂಡು ಹೋಗಿ, ಉತ್ತಮವಾದೊಂದು ಬಿಡದಿಯಲ್ಲಿ ಅವನಿಗೂ ಅವನ ಕಡೆಯವರಿಗೂ ಸಕಲ ಸೌಕರ್ಯಗಳನ್ನೂ ಏರ್ಪಡಿಸಿ ಕೊಟ್ಟನು. ತರುವಾಯ ಉದಯನು ಸುನಾಗದೇಶದ ಮಂತ್ರಿಗೆ ಈ ವಿಧವಾಗಿ ಒಂದು ಪತ್ರ ಬರೆದನು: "ನಿಮ್ಮ ರಾಜನಾದ ಜಯಚಂದ್ರನು ಈಗ ನನ್ನ ಮನೆಯಲ್ಲಿ ಬಂದಿಯಾಗಿದ್ದಾನೆ. ಈ ಸಂಗತಿಯನ್ನು ನೀವು ರಹಸ್ಯವಾಗಿಯೇ ಇರಿಸಿಕೊಳ್ಳಿರಿ. ನಿಮ್ಮ ರಾಜನಿಗೆ ಯಾವ ಬಗೆಯ ಹಾನಿಯೋ ಅಗೌರವವೋ ಇಲ್ಲ. ಅವನು ಸ್ವಲ್ಪ ಕಾಲ ನಮ್ಮ ಅತಿಥಿಯಾಗಿದ್ದು ನಿಮ್ಮ ದೇಶಕ್ಕೆ ಹಿಂದಿರುಗಿ ಬರುತ್ತಾನೆ. ಅಷ್ಟರೊಳಗೆ ನೀವು ಯುದ್ಧ ಪ್ರಯತ್ನವನ್ನು ಬಿಟ್ಟು ಪ್ರಜೋಪಯೋಗವಾಗ ಕಾರ್ಯಗಳನ್ನು ಮಾಡಬೇಕು. ಜಯಚಂದ್ರನು ಪ್ರಜೆಗಳಲ್ಲಿ ನಾಟಿದ ವಿಷಬೀಜಗಳನ್ನು ತೊಲಗಿಸಿ, ನೆರೆಕರೆ ದೇಶಗಳ ನಡುವೆ ಸ್ನೇಹ ಸಂಬಂಧಗಳು ವೃದ್ಧಿಯಾಗುವ ಹಾಗೆ ಮಾಡಿರಿ. ಈಗ ಯುದ್ಧವು ನಡೆದರೆ ಕೆಲವು ಸಾವಿರ ಕೋಟಿಗಳಷ್ಟು ಪ್ರಜೆಗಳ ಧನವೇ ನಷ್ಟವಾಗುತ್ತದೆ. ನಿಮ್ಮ ದೇಶದಲ್ಲಿ ಪ್ರಜೆಗಳ ಸಂಕ್ಷೇಮ ಕಾರ್ಯಗಳು ನಿರ್ವಿಘ್ನವಾಗಿ ನಡೆಯಲು ನಮ್ಮ ದೇಶದ ಪರವಾಗಿ

ಹತ್ತು ಕೋಟಿ ವರಹಗಳನ್ನು ಕಾಣಿಕೆಯಾಗಿ ಕೊಡುತ್ತೇನೆ, ಇದು ಯುದ್ಧವನ್ನು ನಿಲ್ಲಿಸಿದುದಕ್ಕೆ ನಿಮಗೆ ಸಿಗುವ ಪ್ರತಿಫಲ".

ಈ ಪತ್ರವನ್ನು ಓದಿ ಜಯಚಂದ್ರನ ಮಂತ್ರಿಯ ಹೃದಯವು ಉಕ್ಕಿಬಂತು. ಉದಯನ ಒಳ್ಳೆಯ ತನವು ಎಷ್ಟರ ಮಟ್ಟಿನದೆಂದು ಅವನಿಗೆ ಸ್ಪಷ್ಟ ವಾಯಿತು. ಕೂಡಲೇ ಅವನು ರಾಜನು ಇಲ್ಲವೆಂಬ ವಿಷಯವು ಪ್ರಜೆಗಳಿಗೆ ಗೊತ್ತಾಗದಂತೆ ತಕ್ಕ ಬಂದೋಬಸ್ತು ಮಾಡಿಸಿ, ರಾಜ್ಯಪಾಲನೆಯನ್ನು ನಡೆಸ ತೊಡಗಿದನು. ಜಯಚಂದ್ರನು ಉದಯ ನೊಂದಿಗೆ ಸ್ನೇಹ ಮಾಡಿಕೊಂಡನೆಂಬ ವಾರ್ತೆ ಹರಡಿಸಿದನು. ಉದಯನು ಕಳುಹಿಸಿದ ಧನದಿಂದ ಉದಯನ ಹೆಸರಿನಲ್ಲಿ ಪ್ರಜಾಸಂಕ್ಷೇಮ ಕಾರ್ಯ ಗಳನ್ನು ಪ್ರಾರಂಭಿಸಿದನು.

ಉದಯನು ಜಯಚಂದ್ರನನ್ನು ಆರು ತಿಂಗಳವರೆಗೆ ತನ್ನ ಬಂದಿಯಾಗಿ ಇರಿಸಿಕೊಂಡನು. ಈ ಕಾಲದಲ್ಲಿ ಅವನಿಗೆ ಎಷ್ಟೋ ಹಿತಬೋಧನೆ ಮಾಡಿದನು. ಅವನನ್ನು ಬಿಡುಗಡೆ ಮಾಡಿ ಕಳುಹಿಸುವ ಮೊದಲು, ತಾನು ಮಂತ್ರಿಗೆ ಕಳುಹಿಸಿದ ಪತ್ರವನ್ನು ಕುರಿತು ವಿವರಿಸಿ ಹೇಳಿ, "ನೀನು ನನ್ನ ಬಂದಿಯಾದುದನ್ನು ತುಂಬ ರಹಸ್ಯವಾಗಿಯೇ ಇರಿಸಿಕೊಳ್ಳಲಾಗಿದೆ. ನೀನು ಮಾರುವೇಷದಲ್ಲಿ ನಿನ್ನ ದೇಶವನ್ನು ಪ್ರವೇಶ ಮಾಡು. ನಿನ್ನ ಪ್ರಜೆಗಳು ನನ್ನನ್ನು ಕುರಿತು ಏನು ಹೇಳಿಕೊಳ್ಳುತ್ತಿರುವರೆಂದು ಸ್ವಂತ ಕಿವಿಗಳಿಂದ ಕೇಳು. ನಿನ್ನ ಪ್ರಜೆಗಳು ನನ್ನನ್ನು ದ್ವೇಷಿಸುವರಾದರೆ ನಾವು ಯುದ್ಧ ಮಾಡೋಣ. ಇಲ್ಲದ ಪಕ್ಷದಲ್ಲಿ ನಾವಿಬ್ಬರು ಮಾತ್ರ ದ್ವಂದ್ವ ಯುದ್ಧ ಮಾಡೋಣ. ಅದು ಕೂಡಾ ನಿನಗೆ ಯುದ್ಧವೇ ಬೇಕೆಂದಾದರೆ ಮಾತ್ರ. ಇಲ್ಲದಿದ್ದರೆ ನಾವು ಸ್ನೇಹಿತರಾಗಿರೋಣ" ಎಂದನು.

ಹಾಗೆಯೇ ಜಯಚಂದ್ರನು ವೇಷ ಬದಲಾಯಿಸಿ ಕೊಂಡೇ ತನ್ನ ದೇಶಕ್ಕೆ ಹೋದನು. ಎಲ್ಲಿನೋಡಿದರೂ ಉದಯನ ಸ್ತೋತ್ರ ಪಾಠಗಳೇ ಅವನ ಕಿವಿಗೆ ಬೀಳುತ್ತಿದ್ದುವು, ಉದಯನ ಹೆಸರಿನಲ್ಲಿ ರಾಜ್ಯದೊಳಗೆ ಬಾವಿಗಳು, ಕೆರೆಗಳು, ವೈದ್ಯಶಾಲೆಗಳು, ಪಾಠಶಾಲೆ



ಗಳು ಕಾಣುತ್ತಿದ್ದುವು. ಸುನಾಗ ದೇಶದ ಪ್ರಜೆಗಳೆಲ್ಲಾ ಈಗ ಪುನ್ನಾಗ ದೇಶದ ಮೇಲೆ ಸ್ನೇಹಭಾವದಲ್ಲಿದ್ದಾರೆ.

ಇದನ್ನೆಲ್ಲ ನೋಡುತ್ತಾ ಜಯಚಂದ್ರನು ರಾಜಧಾನಿಯನ್ನು ಸೇರಿಕೊಂಡು, ಮಂತ್ರಿಯನ್ನು ನೋಡಿ, "ಏನಿದೆಲ್ಲಾ ?" ಎಂದನು. ತಮ್ಮ ರಾಜನು ತಿರುಗಿ ಬಂದುದನ್ನು ನೋಡಿ ಮಂತ್ರಿ ಬಹಳ ಸಂತೋಷ ವ್ಯಕ್ತಪಡಿಸಿ, "ಉದಯನು ಹೇಳಿದ ಹಾಗೆಯೇ ಮಾಡಿದ್ದಾನೆಂದಾಯಿತು. ನಿಮ್ಮನ್ನು ಕ್ಷೇಮವಾಗಿ ಕಳುಹಿಸಿಕೊಟ್ಟಿದ್ದಾನೆ !" ಎಂದು ಶ್ಲಾಘಿಸಿ ಮಾತಾಡಿದನು.

ಜಯಚಂದ್ರನು ಕೋಪದಿಂದ, "ನನ್ನ ಶತ್ರು ದೇಶದ ರಾಜನ ಮೇಲೆ ನನ್ನ ಎದುರಿನಲ್ಲೇ ಸ್ತೋತ್ರ ಪಾಠ ಮಾಡುವೆಯಾ ? ನೀನು ರಾಜದ್ರೋಹಿ ಯಲ್ಲವೇನು ?" ಎಂದನು.

"ಪ್ರಭೂ ! ಪ್ರಜೆಗಳಿದ್ದರೆ ತಾನೇ ರಾಜನಿಗೆ ಹೆಸರು ? ಯುದ್ಧವು ಪ್ರಜೆಗಳಿಗೆ ಮುಪ್ಪು ತರುವಂಥಾದ್ದಲ್ಲವೇನು ? ಈ ಆರು ತಿಂಗಳಿನಲ್ಲಿ ನಾನು ಎಷ್ಟೋ ಪ್ರಜೋಪಯೋಗವಾದ ಕಾರ್ಯ ಗಳನ್ನು ಮಾಡಲು ಸಾಧ್ಯವಾಯಿತು. ಯುದ್ಧದ ಪ್ರಯತ್ನವನ್ನು ಬಿಟ್ಟುದರಿಂದಲೇ ಉಳಿದ ಧನದಿಂದ, ಸ್ವಲ್ಪ ಹಣ ಪ್ರತಿಫಲವಾಗಿ ಉದಯನೂ ಕಳುಹಿ ಸಿದ್ದರಿಂದ, ಎಷ್ಟೋ ಒಳ್ಳೊಳ್ಳೆಯ ಕೆಲಸಗಳು ನಡೆದು, ನಮ್ಮ ಪ್ರಜೆಗಳು ಸಂತೋಷ ಸುಖವನ್ನು ಅನುಭವಿಸುವಂತಾಗಿದೆ. ನೀವು ಅವಮಾನಕರವಾಗಿ ಮಾತಾಡಿದರೂ ಸಹಿಸಿದ್ದು ಮಾತ್ರವಲ್ಲ, ನಿಮ್ಮನ್ನು ಬಂದೀಯಾಗಿ ಹಿಡಿದರೂ ಸಹಾ ನಮ್ಮ ರಾಜ್ಯವನ್ನು ಆಕ್ರಮಿಸುವ ಪ್ರಯತ್ನ ಉದಯನು ಮಾಡಲೇ ಇಲ್ಲ. ಅವನ ದೊಡ್ಡತನವನ್ನು ನಾನು ಮಾತ್ರವಲ್ಲ ಪ್ರಜೆಗಳೂ ಮೆಚ್ಚುತ್ತಾರೆ. ತಾವೇಕೆ ಇದನ್ನು ಅಂಗೀಕರಿಸಬಾರದು ?" ಎಂದನು ಮಂತ್ರಿ.

ತನ್ನ ದೇಶವು ಸುಭಿಕ್ಷವಾಗಿರುವುದನ್ನು ಕಣ್ಣಾರೆ ನೋಡಿದ ಜಯಚಂದ್ರನಿಗೆ ಮಂತ್ರಿಯ ಮಾತುಗಳಿಂದ ಜ್ಞಾನೋದಯವಾಯಿತು. ಕೂಡಲೇ ಅವನು ಉದಯನಿಗೆ ಒಂದು ಪತ್ರ ಬರೆದು ಕಳುಹಿಸಿದನು, "ಮಿತ್ರಾ ಉದಯಾ ! ನನ್ನ ಪ್ರಜೆಗಳು ನನಗಿಂತ ಹೆಚ್ಚಾಗಿ ನಿನ್ನನ್ನೇ ಅಭಿಮಾನಿಸಿಕೊಂಡಿರುವುದನ್ನು ನೋಡಿದೆ. ಪ್ರಜೆಗಳ ಮನಸ್ಸನ್ನು ಬದಲಾಯಿಸುವುದು ರಾಜನ ಕೈಯಲ್ಲಿರುವ ಕೆಲಸವೆಂದು ನೀನು ನಿರೂಪಿಸಿರುವಿ. ನಾನೀಗ ನಿನ್ನ ದೇಶದೊಂದಿಗೆ ಯುದ್ಧಕ್ಕೆ ತಲೆ ಹಾಕುವ ಯೋಚನೆಯನ್ನು ಪೂರ್ತಿ ಬಿಟ್ಟು, ನೀನು ಕೊನೆಗೆ ಹೇಳಿದಂತೆ ನಿನ್ನನ್ನು ಸ್ನೇಹಾ ಲಿಂಗನದಿಂದ ಬದ್ಧರಾಗಲು ಆಹ್ವಾನಿಸುತ್ತೇನೆ".

ಇದನ್ನು ಓದಿ ಉದಯನು ಸಂತೋಷಪಟ್ಟನು. ಹೀಗೆ ಅವರ ಮೈತ್ರಿ ಚಿರಕಾಲ ವರ್ಧಿಸಿಕೊಂಡಿತ್ತು.






## ೧೩

[ಸಮರಸೇನನನ್ನು ಅಕಸ್ಮಾತ್ತಾಗಿ ಹಿಡಿದೊಯ್ದು ಸೆರೆಮನೆಯಲ್ಲಿ ಹಾಕಿದವರು ವ್ಯಾಘ್ರದತ್ತನ ಭಟರು. ವ್ಯಾಘ್ರದತ್ತನು ಸಮರಸೇನನೊಂದಿಗೆ, ಸತ್ತು ಹೋದ ಶಾಕ್ತೇಯನ ತ್ರಿಶೂಲದ ವಿಷಯ ಕೇಳಿದನು. ತನಗೇನೂ ತಿಳಿಯದೆಂದರೂ ನಂಬದೆ, ಸಮರಸೇನನನ್ನು ಕೊಲ್ಲಲು ನಿಶ್ಚಯಿಸಿದನು. ರಾತ್ರಿಯಲ್ಲಿ ಇಬ್ಬರು ಹೊಸಬರು ಸಮರಸೇನನನ್ನು ಬಂಧಮುಕ್ತಗೊಳಿಸಿ ಕರೆದುಕೊಂಡು ಹೋದರು.]

**ಸ**ಮರಸೇನನನ್ನು ತಮ್ಮೊಂದಿಗೆ ಕರೆದೊಯ್ಯುವ ಆ ಇಬ್ಬರು ಭಟರು, ಅಲ್ಲಿ ಇಲ್ಲಿ ಅಡಗುತ್ತ ಒಂದಾನೊಂದು ಹಳ್ಳಿಯ ಕಡೆಗೆ ಹೋಗುತ್ತಿದ್ದರು. ಹೋದ ಹೋದಂತೆ ಆ ಹಳ್ಳಿಯಲ್ಲಿ ಏನೋ ಗಲಾಟೆ ಎದ್ದಿರುವಂತೆ ಕಾಣುತ್ತಿತ್ತು. ಬಲವಾದ ಗರ್ಜನಾ ಧ್ವನಿಯಿಂದ ಕೆಲವರು ಗದರಿಸಿಕೊಂಡು ಓಡಾಡುತ್ತಿದ್ದರು. ಕೆಲವರು ತುಂಬಾ ಹೆದರಿ "ಅಯ್ಯೋ-ನಾವರಿಯೆವಪ್ಪಾ" ಎಂದು ಆರ್ತ ಸ್ವರದಿಂದ ಗೋಳಿಡುತ್ತಿದ್ದರು. ಸಮೀಪಹೋದಂತೆ ಅಲ್ಲಿಯ ಭಯಂಕರ ಸ್ಥಿತಿ ಕಾಣ ತೊಡಗಿತು. ಬಿಚ್ಚುಗತ್ತಿಗಳನ್ನು ಧರಿಸಿದ ವ್ಯಾಘ್ರದತ್ತನ ಭಟರು ಹಳ್ಳಿಯಲ್ಲಿರುವ ಮನೆಗಳನ್ನೆಲ್ಲಾ ಶೋಧಿಸಿಕೊಂಡಿದ್ದರು. ಭಯಭ್ರಾಂತರಾದ ಹಳ್ಳಿಯ ನಿವಾಸಿಗಳು ಅಕ್ಕಪಕ್ಕಗಳಲ್ಲಿರುವ ಕಾಡುಗಳ ಕಡೆಗೂ ಗುಡ್ಡಗಳ ಕಡೆಗೂ ಓಡುತ್ತಿದ್ದರು. ನಾಲ್ಕು ಕಡೆಗಳಿಂದಲೂ ಹೆಂಗುಸರ, ಮಕ್ಕಳ, ಮುದುಕರ ಆರ್ತನಾದಗಳು!

"ಶಿವದತ್ತನೆಲ್ಲಿದ್ದಾನೆ? ಹೇಳಿರಿ!" ಎಂದು ಕೂಗಿಕೂಗಿ ಕೇಳುತ್ತ ಸಿಕ್ಕಿದವರನ್ನೆಲ್ಲ ಭಟರು ಹಿಡಿದು ನಿಲ್ಲಿಸಿ ಪೀಡಿಸುತ್ತಿದ್ದರು. ಗೊತ್ತಿಲ್ಲದವರನ್ನು




ಹಿಂಸಿಸುತ್ತಿದ್ದರು. ಸಮರಸೇನನೂ ಭಟರೂ ಆ ಪರಿಸ್ಥಿತಿಯನ್ನು ತುಸುದೂರದಲ್ಲೇ ಅಡಗಿಕೊಂಡು ನೋಡಿದರು. ಅವರು ಹೋಗಬೇಕಾದ ಆ ಹಳ್ಳಿಗೆ, ಈ ಪರಿಸ್ಥಿತಿಯಲ್ಲಿ ಪ್ರವೇಶಿಸುವುದು ಸರಿಯಲ್ಲವೆಂದು ಸಮರಸೇನನನ್ನು ಕರೆದೊಯ್ಯುವ ಭಟರಿಗೆ ತೋರಿತು. ಏನು ಮಾಡುವುದೆಂದು ತೋರದೆ ಅವರು ಸಮರಸೇನನೊಂದಿಗೆ ಮರಗಳ ಹಿಂದೆ ಎಚ್ಚರದಿಂದ ಅಡಗಿದ್ದರು.

ಸಮರಸೇನನಿಗಂತೂ ಹಿಂದೂ ಮುಂದೂ ಒಂದೂ ತಿಳಿಯದು. ಹೊಸ ಪ್ರಶ್ನೆ ಬೇರೆ. ಯಾರು ಆ ಶಿವದತ್ತ? ಅವನಿಗೂ ಈ ಹುಡುಕುವವರಿಗೂ ಏನು ಸಂಬಂಧ? ಸಮರಸೇನನು ಮೆಲ್ಲದನಿಯಿಂದ ಭಟರನ್ನು ನೋಡಿ "ಶಿವದತ್ತನೆಂದರೆ ಯಾರೆಂದು ನಿಮಗೆ ಗೊತ್ತೇ? ಅವನಿಗಾಗಿ ಹಳ್ಳಿಯವರನ್ನು ಹಿಂಸಿಸುವ ಆ ಭಟರು ವ್ಯಾಘ್ರದತ್ತನ ಗುಂಪಿನವರ ಹಾಗೆ ಕಾಣುತ್ತಾರಲ್ಲಾ? ಏನು ವ್ಯವಹಾರವೋ?" ಎಂದು ಕೇಳಿದನು. "ನಾವು ಆ ಶಿವದತ್ತರ ಕಡೆಯವರೇ. ಅವರೇ ನಮ್ಮ ನಾಯಕ. ಅವರ ಆಜ್ಞೆಯ ಕಾರಣದಿಂದಲೇ ನಾವು ನಿಮ್ಮನ್ನು ಸೆರೆಮನೆಯಿಂದ ಬಿಡಿಸಿ ಕರೆದೊಯ್ಯುತ್ತಿದ್ದೇವೆ. ಈಗ ಈ ಹಳ್ಳಿಯನ್ನೆಲ್ಲಾ ಅಲ್ಲಕಲ್ಲೋಲ ಮಾಡುವವರು ವ್ಯಾಘ್ರದತ್ತನ ಭಟರೇ, ನಾವೀಗ ವ್ಯಾಘ್ರದತ್ತನ ಭಟರಿಗೆ ಸಿಗಲೇ ಬಾರದು" ಎಂದು ಭಟರಲ್ಲೊಬ್ಬನು ಉತ್ತರಕೊಟ್ಟನು.

ಈ ಉತ್ತರದಿಂದ ಸಮರಸೇನನಿಗೆ ತೃಪ್ತಿಯಾಗುವುದಕ್ಕೆ ಬದಲಾಗಿ ಇನ್ನೂ ಆಶ್ಚರ್ಯದ ಪ್ರಶ್ನೆಯೇ ಎದ್ದು ನಿಂತಿತು. ತನಗೂ ಆ ಶಿವದತ್ತನಿಗೂ ಯಾವ ಸಂಬಂಧ? ತನ್ನಿಂದ ಯಾವ ಪ್ರಯೋಜನಕ್ಕಾಗಿ ತನ್ನನ್ನು ಸೆರೆಮನೆಯಿಂದ ಬಿಡಿಸಿದ್ದಾನೆ? ಅಲ್ಲದೆ ಶಿವದತ್ತನಿಗೂ ವ್ಯಾಘ್ರದತ್ತನಿಗೂ ಇಷ್ಟೊಂದು ವಿರೋಧವೇತಕ್ಕೆ? ಈ ವಿರೋಧದೆಡೆಯಲ್ಲಿ ತನ್ನ ಗತಿ ಏನಾದೀತು?

"ಓಹೋ! ಹಾಗಾದರೆ ನಾವೀಗ ಏನು ಮಾಡಬೇಕು?" ಎಂದು ಭಟರನ್ನು ಕೇಳಿದನು ಸಮರಸೇನ. ಆ ಭಟರು ಮೌನವಾಗಿ ಮುಖ ನೋಡಿಕೊಂಡರು. ಮುಂದೇನು ಮಾಡಬೇಕೆಂದು ತಿಳಿಯದೆ ಅವರೂ ಪ್ರಶ್ನೆಯೊಂದಿಗೆ ತೊಳಲುವಂತೆ ತೋರಿತು.

ಸ್ವಲ್ಪ ಹೊತ್ತಿನ ಮೇಲೆ ಆ ಭಟರಲ್ಲೊಬ್ಬನು "ಅಯ್ಯಾ, ಶಿವದತ್ತರು ನಿಮ್ಮನ್ನು ಈ ಹಳ್ಳಿಗೇ ತರಲು ಹೇಳಿದರು. ನಿಮ್ಮೊಡನೆ ಸ್ನೇಹ ಮಾಡಿಕೊಳ್ಳಬೇಕೆಂತಲೇ ನಮ್ಮನ್ನು ಈ ಕೆಲಸಕ್ಕೆ ನಿಯಮಿಸಿದ್ದಾರೆ. ಆದರೆ ಅವರು ಈ ಹಳ್ಳಿಯಲ್ಲಿರುವ ರಹಸ್ಯ ಅವರ ಶತ್ರುವಾದ ವ್ಯಾಘ್ರದತ್ತನಿಗೆ ಹೇಗೋ ಗೊತ್ತಾಯಿತೆಂದು ಕಾಣುತ್ತದೆ. ಆದ್ದರಿಂದಲೇ ಅವನ ಭಟರು ಈ ಹಳ್ಳಿಯನ್ನೆಲ್ಲಾ ಅಡಿ ಮೇಲು ಮಾಡುತ್ತಿದ್ದಾರೆ. ಇವರು ಹೀಗೆ ಬರುವರೆಂಬ ಗುಟ್ಟು ಶಿವದತ್ತರಿಗೆ ಮೊದಲೇ ಗೊತ್ತಾಗಿ, ಅವರು ಇಲ್ಲಿಂದ ಬೇರೆಲ್ಲಿಗೋ

ತಪ್ಪಿಸಿಕೊಂಡಿರಬೇಕು. ಅವರು ಎಲ್ಲಿಗೆ ಹೋದರೆಂದು ಗೊತ್ತಾಗದೆ ನಾವೇನೂ ಮಾಡುವಂತಿಲ್ಲ. ದೊಡ್ಡ ಇಕ್ಕಟ್ಟಿನಲ್ಲಿದ್ದೇವೆ " ಎಂದನು.

ತುಂಬ ಪೇಚಾಟದ ಪರಿಸ್ಥಿತಿ, ಶಿವದತ್ತನು ಎಲ್ಲಿಗೆ ಹೋಗಿ ಅಡಗಿಕೊಂಡಿರುವನೆಂಬ ಸಂಗತಿ ಗೊತ್ತಾದ ಹೊರತು ಗತ್ಯಂತರವಿಲ್ಲ. ತಾವೆಲ್ಲ ಯಾವ ಕ್ಷಣಕ್ಕೂ ಅಪಾಯದಲ್ಲಿ ಸಿಕ್ಕಿ ಬೀಳಬಹುದು. ಹೀಗೆ ಅವರು ನಾಲ್ಕು ಸುತ್ತಲೂ ಕಿವಿ ಹೊಂದಿಸಿಕೊಂಡಿರುವಾಗ, ಎಲ್ಲಿಂದಲೋ ಒಂದು ಸಿಳ್ಳಿನ ಧ್ವನಿ ಕೇಳಿಬಂದಿತು, ಅದು ಕಾಡು ಹಕ್ಕಿಯ ಧ್ವನಿಯಂತೆ ಒಂದು ಕ್ರಮಬದ್ಧ ವಾಗಿತ್ತು. ಅವರ ಹಿಂದೆ ತುಸು ದೂರದಲ್ಲಿದ್ದೊಂದು ಹೆಮ್ಮರದ ಮೇಲಿನಿಂದ ಆ ಸಿಳ್ಳು ಹೊರಡುತಿತ್ತು. ಕೂಡಲೇ ಮೂವರೂ ಆ ಸಿಳ್ಳಿನ ಪರಿಚಯವಿರುವ ವರಂತೆ ಆ ಕಡೆಗೆ ಹೋಗಿ ನೋಡಿದರು. ಆ ಮರದ ಕೊಂಬೆಯಲ್ಲಿದ್ದ ಒಬ್ಬ ವ್ಯಕ್ತಿ ಅವರ ಕಡೆಗೆ ಕೈಯಾಡಿಸುತ್ತಾ ಸಿಳ್ಳು ಹಾಕುತ್ತಿದ್ದನು. ಮರದ ಕೊಂಬೆಯಲ್ಲಿರುವ ಆ ವ್ಯಕ್ತಿ ತಮ್ಮ ಮಿತ್ರನೋ ಶತ್ರುವೋ ಎಂದು ಸಮರಸೇನನಿಗೆ ಸಂದೇಹವೆದ್ದಿತು. ತಾನು ಹೇಗಿದ್ದರೂ ಈ ಪ್ರಾಂತಕ್ಕೆ ಹೊಸಬನಾದುದರಿಂದ ತನ್ನನ್ನು ಕರೆದು ತಂದವರು ಹೇಗೆ ಮಾಡುವರೋ ಹಾಗೆ ಮಾಡುವುದರ ಹೊರತು ಬೇರೆ ಮಾರ್ಗ ತನಗಿಲ್ಲವೆಂದು ಅವನಿಗೆ ಗೊತ್ತಿತ್ತು. ಆ ಭಟರ ಮುಖದಲ್ಲಿ ಈಗ ಸ್ವಲ್ಪ ಆಶೆ ಕಾಣತಿತ್ತು.

ಸಮರಸೇನನೊಂದಿಗಿದ್ದ ಇಬ್ಬರಲ್ಲೊಬ್ಬನು ಇನ್ನೊಂದು ಧಾಟಿಯಲ್ಲಿ ಸಿಳ್ಳಿನ ಧ್ವನಿಯೆಬ್ಬಿಸಿದನು, ಅದಕ್ಕೆ ತಕ್ಕ ಹಾಗೆ ಮರದ ಕೊಂಬೆಯಲ್ಲಿದ್ದವನೂ ಸಿಳ್ಳು ಹೊಡೆದನು. ಏನೂ ಅರಿಯದವರಿಗೆ ಕಾಡು ಹಕ್ಕಿಗಳೆರಡು ಮಾತಾಡಿಕೊಂಡಂತಿತ್ತು ಆ ಧ್ವನಿಗಳು.

"ಅವನು ನಮಗೆ ಮಿತ್ರನೇ. ನಮ್ಮ ರಹಸ್ಯ ಸಂಕೇತವನ್ನು ತಿಳಿದನು. ಈ ಸಂಕೇತದ ಸಿಳ್ಳು ಶಿವದತ್ತನ ಕಡೆಯವರಿಗೆ ಹೊರತು ಬೇರೆಯವರಿಗೆ ತಿಳಿಯದು. ಬನ್ನಿರಿ, ಅಲ್ಲಿಗೆ ಹೋಗುವ " ಎಂದನು ಒಬ್ಬ ಭಟ.






"ಇವರೇ ಸಮರಸೇನರು. ವ್ಯಾಘ್ರದತ್ತನ ಬಂಧನದಿಂದ ಬಿಡಿಸಿಕೊಂಡು ಬಂದಿದ್ದೇವೆ. ಇವರು ಆದಷ್ಟು ಬೇಗ ಶಿವದತ್ತರನ್ನು ಕಲೆತುಕೊಳ್ಳಬೇಕಾಗಿದೆ. ಈಗ ಅವರು ಎಲ್ಲಿರಬಹುದು ? ಏನೂ ಹೇಳಿಲ್ಲವೆ ?" ಎಂದು ಒಬ್ಬನು ಪ್ರಶ್ನೆ ಮಾಡಿದನು.

ಅದಕ್ಕೆ ಮರದಿಂದಿಳಿದವನು, "ಅವರು ಎಲ್ಲಿಗೆ ಹೋಗುವರೆಂದು ನನಗೆ ಹೇಳಲಿಲ್ಲ. ಹೋದ ದಿಕ್ಕು ಗೊತ್ತಾದರೂ ಯಾವ ಕಡೆಗೆ ತಿರುಗಿದರೋ ನನಗೆ ಗೊತ್ತಿಲ್ಲ. ಈ ನಕ್ಷೆಯ ಕಾಗದವನ್ನು ನನ್ನ ಕೈಗೆ ಕೊಟ್ಟು ಹೋಗಿದ್ದಾರೆ. ಇದರಲ್ಲಿ ಅವರಿರುವ ಸ್ಥಳವನ್ನು ಗುರುತಿಸಿದ್ದಾರಂತೆ. ಇದನ್ನು ನೀವೇ ಪರಿಶೀಲಿಸಿ ನೋಡಬೇಕು. ನನಗಂತೂ ಏನೂ ಅರ್ಥವಾಗುವುದಿಲ್ಲ" ಎಂದು ಹೇಳಿ ತನ್ನ ದುಸ್ತಿನೊಳಗೆ ಇಟ್ಟುಕೊಂಡಿದ್ದ ಒಂದು ಕಾಗದದ ಸುರುಳಿಯನ್ನು ತೆಗೆದು ಸಮರಸೇನನಿಗೆ ಕೊಟ್ಟನು.

ಸಮರಸೇನನೂ ಭಟರೂ ಆ ಸೈನಿಕನಿರುವ ಮರದ ಬಳಿಗೆ ಹೋದರು. ಅವರನ್ನು ನೋಡಿ ಮರದ ಮೇಲಿನವನು ಕೆಳಗಿಳಿದು ಬಂದನು. ಇಳಿದವನು ಹಳ್ಳಿಯ ಕಡೆಗೆ ಸ್ವಲ್ಪ ಹೊತ್ತು ನೋಡಿ, "ನಿಮಗಾಗಿಯೇ ಶಿವದತ್ತರು ನನ್ನನ್ನು ಇಲ್ಲಿ ಕಾವಲಿರಿಸಿದ್ದಾರೆ. ಈಗ ಮೂರನೇ ಜಾಮದಲ್ಲಷ್ಟೇ ವ್ಯಾಘ್ರದತ್ತನ ಭಟರು ಈ ಗ್ರಾಮಕ್ಕೆ ಧಾವಿಸಿ ಬಂದಿದ್ದಾರೆ. ಅದನ್ನು ಗೂಢಚಾರರಿಂದ ಮುಂದಾಗಿ ತಿಳಿದ ಶಿವದತ್ತರು, ತಮ್ಮ ಅನುಚರರೊಂದಿಗೆ ಆ ಮಾರ್ಗವಾಗಿ ತಪ್ಪಿಸಿಕೊಂಡರು. ನನ್ನನ್ನು ನೀವು ಕಾಣುವವರೆಗೂ ಇಲ್ಲೇ ಅಡಗಿರಲು ಹೇಳಿದರು" ಎಂದನು.

ಅವನು ಹೇಳಿದ ಮಾತನ್ನು ಕೇಳಿದ ಮೇಲೆ, ಅವರಿಗೆಲ್ಲ ಕಮರಿದ ಪ್ರಾಣಕ್ಕೆ ನೀರೆರೆದಂತಾಯಿತು. ಆದರೆ ಶಿವದತ್ತನು ಈಗ ಎಲ್ಲಿದ್ದಾನೆ ? ಅವನನ್ನು ಕಲೆತುಕೊಳ್ಳುವುದು ಹೇಗೆ ? ಇದು ಅವರಾರಿಗೂ ಗೊತ್ತಿಲ್ಲ.

ಸಮರಸೇನನಿಗೂ ಪರಿಸ್ಥಿತಿ ಸ್ವಲ್ಪ ಮಟ್ಟಿಗೆ ಅರ್ಥವಾಯಿತು. ತಾನು ಸೆರೆಮನೆಯಿಂದ ತಪ್ಪಿದ ಕೂಡಲೇ ಅದು ವ್ಯಾಘ್ರದತ್ತನಿಗೆ ಗೊತ್ತಾಗಿ, ಶಿವದತ್ತನ ಶೋಧನೆಗೆ ತೊಡಗಿಸಿದ್ದಾನೆ.

ಸಮರಸೇನನು ಆ ಕಾಗದವನ್ನು ಬಿಡಿಸಿ ಬೆಳಂಜಾವದ ಪ್ರಕಾಶಕ್ಕೆ ಹಿಡಿದು ನೋಡಿದನು. ಅದರಲ್ಲಿ ಗುಡ್ಡ ಕಾಡುಗಳಲ್ಲಿ ಪಾಳುಬಿದ್ದಂತಹ ಕೆಲವು ಗೃಹಗಳೂ, ಪಾಳು ಬಾವಿಗಳೂ ಕೆರೆಗಳೂ ಚಿತ್ರಿಸಿರುವುದು ಕಂಡಿತು. ಪ್ರತಿ ಚಿತ್ರದ ಕೆಳಗೂ ಅದರ ಹೆಸರು ಕೂಡಾ ನಮೂದಿಸಿತ್ತು. ಆದರೆ ಶಿವದತ್ತನು ಎಲ್ಲಿ ಅಡಗಿರುವನೆಂಬುದು ಮಾತ್ರ ಗೊತ್ತಾಗಲಿಲ್ಲ. ಅದನ್ನು ಗೊತ್ತುಪಡಿಸುವಂತಹ ಗುರುತುಗಳೂ ಕಾಣಲಿಲ್ಲ. ಬಹುಶಃ ಶಿವದತ್ತನು ಈ ಹಳ್ಳಿಯ ಕಡೆಯಿಂದ ತೋರುವ ಬಾಣದ ಗುರುತಿನ ಪ್ರಕಾರ ತಪ್ಪಿಸಿಕೊಂಡು ಹೋಗಿರಬೇಕು. ಅದನ್ನು ನೋಡುತ್ತಾ ಸಮರಸೇನನು ಹೀಗೆಂದನು :

"ಶಿವದತ್ತನು ಈ ಗುಡ್ಡಗಳಲ್ಲಿ ಪಾಳುಬಿದ್ದಿರುವ ಗೃಹಗಳ ಕಡೆಗೆ ಓಡಿದ್ದಾನೆ. ಅಪಾಯದಲ್ಲಿ ಸಿಕ್ಕಿದ ಅವನು ಈ ಪಾಳುಬಿದ್ದ ಗೃಹಗಳಾಚೆಗೆ ಓಡಿಗುದರ ಅರ್ಥವೇನೋ ಗೊತ್ತಾಗುವುದಿಲ್ಲ. ಅದು ಅವನ ಪರಿಚಿತ ಸ್ಥಳವಿರಬೇಕು. ಸುರಕ್ಷಿತವಾಗಿಯೂ ಇರಬಹುದು. ನಾವು ಆ ಕಡೆಗೆ ಹೋಗದೆ ಬೇರೆ ಗತಿ ಇಲ್ಲ".

ಇದಕ್ಕೆ ಅವರೆಲ್ಲರೂ ಒಪ್ಪಿಗೆಯನ್ನು ಸೂಚಿಸಿದರು. ಚಿತ್ರವನ್ನು ನೋಡಿ ದಾರಿ ತಿಳಿದು ಹೋಗುವ ಬಾಧ್ಯತೆ ಸಮರಸೇನನ ಮೇಲೆಯೇ ಬಿತ್ತು. ಅವನು ಒಮ್ಮೆ ಸಮೀಪದಲ್ಲಿರುವ ಹಳ್ಳಿಯ ಕಡೆಗೆ ನೋಡಿದನು. ಹಳ್ಳಿಯ ಮನೆಗಳಿಗೆಲ್ಲಾ ಬೆಂಕಿ ಬಿದ್ದು ಉರಿಯುತ್ತಿತ್ತು. ವ್ಯಾಘ್ರದತ್ತನ ಭಟರು ಕೂಗಾಡುತ್ತ ವಿನೋದಿಸುತ್ತಿರುವಂತೆ ಕಾಣುತಿತ್ತು. ದುಷ್ಟರ ಅಟ್ಟಹಾಸವನ್ನು ನೋಡಿ ಸಮರಸೇನನಿಗೆ ತುಂಬಾ ಕೋಪ ಬಂದಿತು. ಆದರೆ ತನ್ನೊಂದಿಗಿರುವ ಈ ಅಲ್ಪ ಬಲದೊಂದಿಗೆ ಅವರನ್ನು ಇದಿರಿಸುವುದೆಂದರೆ ಆ ಬೆಂಕಿಗೆ ಹೋಗಿ ಬೀಳುವುದೇ ಸರಿ. ಇಲ್ಲಿಂದ ಕೂಡಲೇ ಹೊರಟು ಹೇಗಾದರೂ ಆ ಹೊಸ ಮಿತ್ರನಾದ ಶಿವದತ್ತನನ್ನು ಸೇರಬೇಕು. ಅವನ ಮೂಲಕ ತಾನು ತಿಳಿಯಬೇಕಾದ ಏನೋ ಮುಖ್ಯ ವಿಷಯವಿರಲೇಬೇಕು.

ಹೀಗೆ ಯೋಚಿಸಿ ಸಮರಸೇನನು ಆ ಪಟವನ್ನು ಪರೀಕ್ಷಿಸಿ ನೋಡಿ, ಭಟರಿಗೆ ತನ್ನ ಹಿಂದೆ ಬರುವಂತೆ ಹೇಳಿ ಮುಂದೆ ನಡೆದನು. ಪಟದಲ್ಲಿ ಸೂಚಿಸಿದ ದಿಕ್ಕನ್ನು ಅನುಸರಿಸಿಕೊಂಡು ಜಾಗರೂಕತೆಯಿಂದ ನಡೆಯಬೇಕಿತ್ತು. ಅಲ್ಲದೆ, ವ್ಯಾಘ್ರದತ್ತನ ಕ್ರೂರ ಭಟರು ದಾರಿಯಲ್ಲಿ ಅಡ್ಡಬರದಂತೆಯೂ ನೋಡಬೇಕಿತ್ತು. ಸ್ವಲ್ಪ ದೂರದವರೆಗೆ ಕಾಡು ದಾರಿಯಲ್ಲಿ ನಡೆದು ಅವರೆಲ್ಲ ಇನ್ನೊಂದು ಬದಿಯ ಗುಡ್ಡಗಾಡು ಪ್ರಾಂತವನ್ನು ತಲಪಿದರು. ಆ ಪ್ರದೇಶ ಚಿಕ್ಕವೂ




ದೊಡ್ಡವೂ ಆದ ದಿಣ್ಣೆ ಗುಡ್ಡಗಳಿಂದ ಎಲ್ಲಿ ನೋಡಿದರೂ ಏರು ತಗ್ಗುಗಳಾಗಿ ಕಾಣುತಿತ್ತು. ಎಲ್ಲಿಯೂ ಒಂದು ಕಾಲುದಾರಿಯಾಗಲೀ, ಮನುಷ್ಯರು ನಡೆದಾಡಿದ ಸುಳಿವಾಗಲೀ ಕಾಣುತ್ತಿರಲಿಲ್ಲ.

ಸಮರಸೇನನು ಒಂದು ದಿಣ್ಣೆಯ ಪ್ರದೇಶವನ್ನೇರಿ ಸುತ್ತಲೂ ನೋಡಿದನು. ಗುಡ್ಡಗಳ ಕೆಳಗೆ ಸಣ್ಣ ಕಣಿವೆಗಳಿರುವಂತೆ ಕಂಡಿತು. ಮೊದಲು ಆ ಕಣಿವೆಯ ಪ್ರದೇಶಕ್ಕೆ ಹೋದರೆ, ಆ ಮೇಲಿನ ಮಾರ್ಗವು ಮತ್ತೆ ತಿಳಿಯಬಹುದೆಂದು ಚಿತ್ರಪಟದ ಮೂಲಕವಾಗಿ ಊಹಿಸಿಕೊಂಡನು. ಒಂದು ವೇಳೆ ತಾವು ಬಂದ ದಾರಿಯೂ ಊಹನೆಗಳೂ ತಪ್ಪಾಗಿ ಹೋಗಿ ಬಿಟ್ಟರೆ ಇಷ್ಟು ಕಷ್ಟಪಟ್ಟದ್ದೆಲ್ಲವೂ ವ್ಯರ್ಥವಾದಂತೆಯೇ! ಆದರೆ ಪ್ರಸ್ತುತ ಪರಿಸ್ಥಿತಿಯಲ್ಲಿ ಎಲ್ಲಿಗೋ ಹೋಗದೆ ಉಪಾಯವಿಲ್ಲದ್ದರಿಂದ, ಸಮರಸೇನನು ಆ ಕಡೆಗೇ ಹೊರಟನು. ಇಳಿಜಾರಿನಲ್ಲಿ ಕಷ್ಟಪಟ್ಟು ಹೋಗುತ್ತಿದ್ದಂತೆ ಅಲ್ಲಿ ಯಾವ

ದಾರಿಯೂ ಇಲ್ಲದೆ ಮುದ್ದೆ ಮುದ್ದೆ ಯಾದ ಮುಳ್ಳು, ಪೊದರುಗಳಿಂದ, ಕಲ್ಲು ಗುಪ್ಪೆಗಳಿಂದ ಸುತ್ತಲೂ ಗಜಿಬಿಜಿಯಾಗಿದ್ದಿತು.

ಎಲ್ಲಿಂದಲೋ ಒಂದು ಧ್ವನಿ ಕೇಳುತ್ತಿದ್ದಿತು. ಮುಂದೆ ಹೋದ ಹಾಗೆ ಅದು ನೀರಿಳಿತದ ಘೋರ್ದನಿಯಾಗಿದೆಯೆಂದು ಗೊತ್ತಾಯಿತು. ಸ್ವಲ್ಪ ಉತ್ಸಾಹದಿಂದ ಮತ್ತಿಷ್ಟು ಮುಂದೆ ಹೋದ ಕೂಡಲೇ ಒಮ್ಮಿಂದೊಮ್ಮೆಗೇ ಪ್ರತ್ಯಕ್ಷವಾದ ಭಯಂಕರ ದೃಶ್ಯವು ಅವರನ್ನು ಸ್ತಂಭಿಸಿ ಬಿಟ್ಟಿತು.

ಎತ್ತರವಾದೊಂದು ಗುಡ್ಡದ ಅಂಚಿನಿಂದ ದೊಡ್ಡ ದೊಂದು ಜಲಪಾತವು ರಾಕ್ಷಸನೊಬ್ಬನ ಬಾಯಿ ಯೊಳಗಿನಿಂದ ಕೆಳಗೆ ಬೀಳುತ್ತಿದ್ದಿತು. ಗುಡ್ಡದ ಬಂಡೆಯಲ್ಲಿ ಅಂತಹ ರಾಕ್ಷಸಾಕಾರದ ಮುಖವನ್ನು ಕೆತ್ತಿ ಕೊರೆಯಲ್ಪಟ್ಟಿದೆ! ನೋಡುವವರಿಗೆ ಆ ಜಲಪಾತವು ರಾಕ್ಷಸನ ತಲೆಯಿಂದ ಹುಟ್ಟಿ ಬಾಯಿ ಯಿಂದ ಹೊರ ಬೀಳುವಂತಿತ್ತು.

"ಇದು ಬಹಳ ವಿಚಿತ್ರವೇ ಸರಿ. ಇಲ್ಲೆಲ್ಲಿಯೂ ಮಾನವರ ಇರುವಿಕೆಯೇ ಇಲ್ಲ. ಆದರೆ ಈ ಶಿಲೆಯಲ್ಲಿ ಇಂತಹ ರಾಕ್ಷಸನ ಬೊಂಬೆ ಕೊರೆದವರು ಕಲ್ಪನೆಯೂ ಕಲಾರಸನೆಯೂ ಇರುವ ಮನುಷ್ಯರೇ! ಅವರು ಯಾವ ಕಾಲದ ಮನುಷ್ಯರೋ?" ಎಂದು ಸಮರ ಸೇನನು ಆಶ್ಚರ್ಯಪಟ್ಟನು.

ಅವನೊಂದಿಗಿದ್ದ ಭಟರು ಆ ಭಯಂಕರ ದೃಶ್ಯ ವನ್ನು ನೋಡಿ ಸುಮ್ಮನಿದ್ದರು. ಹಾಗೆಯೇ ಪರೀಕ್ಷಿಸಿ ನೋಡಿದಾಗ ಆ ಜಲಪಾತದ ಹಿಂದಿನಿಂದ ಒಂದು ಸುರಂಗವಿರುವಂತೆ ಕಂಡು ಬಂತು. ಹಾಗಾದರೆ ಶಿವದತ್ತನು ಆ ಸುರಂಗದೊಳಗೆ ಹೊಕ್ಕು ಎಲ್ಲಿಗೋ ಹೋಗಿರಬೇಕೆಂದು ಸಮರಸೇನನಿಗೆ ಅನುಮಾನ ವಾಯಿತು. ನಕ್ಷೆಯಲ್ಲಿ ಗೆರೆಗಳ ಮೂಲಕ ತೋರಿಸಿದ್ದು ಈ ಜಲಪಾತವನ್ನೇ ಇರಬೇಕು. ಆ ಪ್ರದೇಶವು ಯಾರಿಗೂ ಅನುಮಾನ ಬಾರದಂತಹ ಸುರಕ್ಷಿತ




ಪ್ರದೇಶವಾಗಿದ್ದೀತು. ಚಿತ್ರಪಟವನ್ನು ಮತ್ತೆ ಮತ್ತೆ ನೋಡುತ್ತ, ತಾವು ಬಂದ ದಾರಿ ಸರಿಯೇ ಎಂಬಂತೆ ತಲೆಯಾಡಿಸಿ ಧೈರ್ಯಗೊಂಡನು. ಇನ್ನು ತಾವೆಲ್ಲ ಆ ಜಲಪಾತದೊಳಗೆ ತೂರಿ ಸುರಂಗ ಪ್ರವೇಶ ಮಾಡಬೇಕು.

ಹೀಗೆ ನಿರ್ಧರಿಸಿ ಭಟರಿಗೂ ಹೇಳಿ, ಸಮರಸೇನನು ಜಲಪಾತದ ನೀರಿಗಿಳಿದನು. ಭಟರೂ ಅವನನ್ನು ಅನುಸರಿಸಿದರು. ಹಾಗೆ ಅವರು ಇಷ್ಟ ದೈವವನು ಸ್ಮರಿಸುತ್ತಾ ಜಲಪಾತದೊಳಗೆ ತೂರಿ ಪೂರ್ತಿ ಒದ್ದೆಯಾಗಿ ಅದರ ಹಿಂದಿದ್ದ ಸುರಂಗದೊಳಗೆ ಪ್ರವೇಶಿಸಿದರು. ಅದು ಸ್ವಲ್ಪ ಎತ್ತರದಲ್ಲಿದ್ದ ಸುರಂಗ ವಾದುದರಿಂದ ಅದರೊಳಗೆ ನೀರು ಪ್ರವೇಶಿಸುತ್ತಿದ್ದಿಲ್ಲ. ಅದು ಕೂಡ ಕೊರೆದು ಮಾಡಲ್ಪಟ್ಟ ಸುರಂಗವೇ.

ಕಗ್ಗತ್ತಲೆಯಾದ ಆ ಸುರಂಗದೊಳಗೆ ಕೈಗಳಿಂದ ಪರಡುತ್ತಾ ಸ್ವಲ್ಪ ದೂರ ಮುಂದೆ ಹೋದರು. ಆಮೇಲೆ ಇದ್ದಕ್ಕಿದ್ದ ಹಾಗೆ ಸೂರ್ಯಕಾಂತಿ ಪಸರಿಸಿದ

ಒಂದು ಸಮತಲ ಪ್ರದೇಶದಲ್ಲಿ ಸುರಂಗದಿಂದ ಹೊರಬಿದ್ದರು. ಆಶ್ಚರ್ಯ! ಪೂರ್ತಿ ಹೊಸ ಲೋಕದಂತೆ ಕಾಣುವ ಆ ಪ್ರದೇಶದಲ್ಲಿ ಸುತ್ತಲೂ ಎತ್ತರವಾದ ಬೆಟ್ಟಗಳೇ ಇದ್ದುವು.

ಹಾಗೆಯೇ ದೃಷ್ಟಿಯನ್ನು ನೆಲದಮೇಲೆ ಹರಡಿದಾಗ, ಅನೇಕ ನವಿಲುಗಳು ಗುಂಪು ಗುಂಪಾಗಿರುವುದನ್ನು ನೋಡಿ ಆಶ್ಚರ್ಯಪಟ್ಟರು. ಅವುಗಳಲ್ಲಿ ಕೆಲವು ನಾಟ್ಯವಾಡುತ್ತಿದ್ದುವು. ಮತ್ತೆ ಕೆಲವು ಆಕಾಶದಲ್ಲಿ ಕುಪ್ಪಳಿಸುತ್ತ ಹಾರುತ್ತ ಕೇಕೇ ಹಾಕುತ್ತಿದ್ದುವು.

"ಏನಿದು? ಇಷ್ಟೊಂದು ನವಿಲುಗಳು ಒಂದೇ ಪ್ರದೇಶದಲ್ಲಿರುವುದನ್ನು ನಾನೆಲ್ಲಿಯೂ ನೋಡಿರಲಿಲ್ಲ. ಯಾವುದೋ ಹೊಸಲೋಕಕ್ಕೆ ಬಂದ ಹಾಗಿದೆ. ಬೆಳಗಾಗಿ ಎಷ್ಟು ಹೊತ್ತಾಯಿತೆಂಬುದೂ ನಮಗೆ ಗೊತ್ತಾಗಿಲ್ಲ ನೋಡಿದಿರಾ? ಸೂರ್ಯನು ಉದಿಸಿ ಅಷ್ಟು ಮೇಲಕ್ಕೆ ಬಂದಿದ್ದಾನಲ್ಲ!" ಎಂದನು ಸಮರಸೇನ. ಅವನೊಂದಿಗಿರುವ ಭಟರು ಕೂಡಾ ಇಂತಹ ಜಲಪಾತವನ್ನಾಗಲೀ, ಇಂತಹ ನವಿಲುಗಳನ್ನಾಗಲೀ ಈ ವರೆಗೂ ನೋಡಿಲ್ಲವಂತೆ!

ಅವರು ಸ್ವಲ್ಪ ಹೊತ್ತು ಆ ನವಿಲುಗಳ ಸುಂದರವಾದ ನಾಟ್ಯ ಕೋಲಾಹಲವನ್ನು ನೋಡುತ್ತ, ದಣಿವಾರಿಸಿಕೊಂಡು ನಿಂತರು. ಆಮೇಲೆ ಅಲ್ಲಿಂದ ಕಾಲುಬಯ್ದುತ್ತ ನಡೆದು, ದೊಡ್ಡದೊಂದು ಬೆಟ್ಟದ ಗುಹೆಯನ್ನು ನೋಡಿ, ಆ ಕಡೆಗೆ ಹೋದರು. ಇಲ್ಲಿಗೆ ಬಂದ ಶಿವದತ್ತನು ಅದರೊಳಗೆ ಹೊಕ್ಕಿರಬಹುದೋ ಏನೋ? ಅವರು ಗುಹೆಯನ್ನು ಸಮೀಪಿಸುವಷ್ಟರಲ್ಲಿ ಹೆದರಿ ಗಬಕ್ಕನೆ ಹಿಂದೆ ಹಾರಿಕೊಳ್ಳುವಂತಾಯಿತು! ಗುಹೆಯೊಳಗಿನಿಂದ ಒಂದು ಆನೆ ಅತಿ ರಭಸದಿಂದ ಹೊರಕ್ಕೆ ಓಡಿ ಬಂತು! ಅದು ಘೀಂಕಾರ ಮಾಡುತ್ತ ಹಾರಿದ ಹಾಗೆ ಹೊರಕ್ಕೆ ಬಂದ ಕೂಡಲೇ ಹೆದರಿ ಹಿಂಜರಿದ ಸಮರಸೇನನೂ ಭಟರೂ ತಲಾ ಒಂದೊಂದು ಕಡೆಗೆ ಓಡಿದರು. ಸಮರಸೇನನು ಸ್ವಲ್ಪ ದೂರ ಒಂದು ದೊಡ್ಡ ಬಂಡೆಗಲ್ಲಿನ ಹಿಂದೆ ಅಡಗಿಕೊಂಡನು. ಆನೆ ಅಷ್ಟೊಂದು ವೇಗವಾಗಿ ಗುಹೆಯೊಳಗಿನಿಂದ ಹೊರಗೆ ಹಾರಿ ಬರಬೇಕಾದರೆ, ಅದು ಗುಹೆಯೊಳಗಿರುವ ತನ್ನ ಪ್ರಬಲ ಶತ್ರುವಿನಿಂದ ಓಡಿಸಲ್ಪಟ್ಟಿರಬೇಕು. ಅಥವಾ ತಪ್ಪಿಸಿಕೊಂಡಿರಬೇಕು.

ಆನೆಯನ್ನು ಹೆದರಿಸಿದಂತಹ ಪ್ರಾಣಿ ಅದೇನಿರಬಹುದು? ಒಂದು ವೇಳೆ ತಾನು ಶಿವದತ್ತನು ಸೂಚಿಸಿದ ನಕ್ಷೆಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ, ತಪ್ಪಿಸಿಕೊಳ್ಳಲಾಗದ ಇಕ್ಕಟ್ಟಿನ ಪ್ರದೇಶಕ್ಕೆ ಬಂದು ಸಿಕ್ಕಿಕೊಂಡಿರಬಹುದೆ? ತನ್ನನ್ನೇ ನಂಬಿದ ಈ ಭಟರ ಕೋಪಕ್ಕೆ ತಾನು ಪಾತ್ರನಾಗಬಹುದೆ? ಹೀಗೆ ಸಮರಸೇನನು ಕೆಟ್ಟ ಅನುಮಾನಗಳಿಂದ ತಳಮಳಕ್ಕೊಳಗಾದನು. (ಇನ್ನೂ ಇದೆ)






# ಸಹಜತೆ

ಬತ್ತದಿರುವ ಒರತೆಯ ಬಾವಿಯಂತೆ ಕಥೆಗಳನ್ನು ಒಸರಿಸಿಕೊಂಡೇ ಇರುವ ಬೇತಾಳನ ತಲೆಯನ್ನು ಬರಿದು ಮಾಡದೆ ಬಿಡೆನೆಂದು ಹಟ ತೊಟ್ಟವನಂತೆ ರಾಜಾ ತ್ರಿವಿಕ್ರಮನು, ಮತ್ತೆ ಮರದ ಬಳಿಗೆ ಹೋಗಿ ಶವವನ್ನು ಕೆಳಗಿಸಿ ಹೆಗಲ ಮೇಲಿರಿಸಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, " ರಾಜಾ, ನೀನು ಯಾರಿಗಾಗಿ ಹೀಗೆ ಶ್ರಮಪಡುತ್ತಿರುವಿಯೋ ಅರ್ಥವಾಗುವುದಿಲ್ಲ. ತ್ಯಾಗವನ್ನೊಂದು ಪರೀಕ್ಷೆಗಿಟ್ಟ ಪಕ್ಷಕ್ಕೆ ಯಾರೂ ಯಾರಿಗೋಸ್ಕರವೂ ಎಂತಹ ತ್ಯಾಗವನ್ನೂ ಮಾಡುವವರಿಲ್ಲ. ನಿನ್ನ ಎಂಥದೋ ತ್ಯಾಗವನ್ನು ನೋಡುವಾಗ ನನಗೆ ಶ್ರೀಪುರದ ರಾಜಕುಮಾರ ನೊಬ್ಬನ ಪರಿಸ್ಥಿತಿ ನೆನಪಾಗುತ್ತದೆ. ನಿನಗೆ ವಿನೋದ ವಾಗಿ ದಾರಿ ಸಾಗುವಂತೆ ಆ ಕಥೆಯನ್ನು ಹೇಳುತ್ತೇನೆ ಕೇಳು " ಎಂದು ಕಥೆಯನ್ನು ಪ್ರಾರಂಭಿಸಿತು :

ಶ್ರೀಪುರವನ್ನು ಗುಣವರ್ಧನನೆಂಬ ರಾಜನು ಆಳುತ್ತಿದ್ದನು. ಅವನ ಮಗ ದಯಾವರ್ಧನನು ತೀವ್ರವಾದ ಕಾಯಿಲೆಯಲ್ಲಿ ಹಾಸಿಗೆ ಹಿಡಿದಿದ್ದನು.

ಬೇತಾಳಕಥೆಗಳು



ರಾಜ ವೈದ್ಯರು ತಮ್ಮ ಪ್ರತಿಭೆಯನ್ನೆಲ್ಲಾ ಉಪಯೋಗಿಸಿ ಬಹು ಶ್ರದ್ಧೆಯಿಂದ ಔಷಧೋಪಚಾರ ಮಾಡಿಕೊಂಡೇ ಇದ್ದರು. ರೋಗವು ಹೆಚ್ಚಾಗುತ್ತಾ ಬರಲು, ಮಂತ್ರ ವೈದ್ಯರು ತಮ್ಮ ನಿವಾರಣೋಪಾಯವನ್ನೂ ಮಾಡಿದರು. ಕಡೆಗೆ ತಾಂತ್ರಿಕರ ತಂತ್ರ ಚಿಕಿತ್ಸೆಯೂ ನಡೆಯಿತು. ರಾಜನು ಯಾವ ಯಾವ ಚಿಕಿತ್ಸೆ ಮಾಡಿಸಿದರೂ ರಾಜಪುತ್ರನ ಅವಸ್ಥೆ ಕೊನೆಯ ಘಟಕ್ಕೇ ಮುಟ್ಟಿತು. ಆ ಸಮಯದಲ್ಲಿ ಒಬ್ಬ ಬೌದ್ಧ ಭಿಕ್ಷು ಯಾರೋ ಕಳುಹಿಸಿದವನಂತೆ ರಾಜಭವನದೊಳಗೆ ಪ್ರವೇಶಿಸಿದನು, ರಾಜನು ಆತನನ್ನು ಸಾದರಪೂರ್ವಕವಾಗಿ ಆಹ್ವಾನಿಸಿ, "ಮಹಾತ್ಮಾ! ಸಾಕ್ಷಾತ್ ಬುದ್ಧ ಭಗವಾನನಂತೆಯೇ ಆಯತವೇಳೆಗೆ ಬಂದಿದ್ದೀರಿ. ನನ್ನ ಮಗನನ್ನು ಮೃತ್ಯು ಮುಖದಿಂದ ನೀವೇ ಕಾಪಾಡಬೇಕು" ಎಂದು ಬೇಡಿಕೊಂಡನು.

"ರಾಜಾ, ನಿನ್ನ ಕುಮಾರನು ಮರಣಶಯ್ಯೆಯಲ್ಲಿರುವನೆಂದೂ, ಆ ಚಿಂತೆಯಿಂದ, ಆಸ್ಥಾನದಲ್ಲಿರುವವರೆಲ್ಲಾ ತಮ್ಮ ತಮ್ಮ ಕೆಲಸಮಾಡುವುದರಲ್ಲಿ ಉಪೇಕ್ಷಿತರಾಗಿದ್ದಾರೆಂದೂ, ದೇಶದ ಪರಿಪಾಲನೆಯೇ ಸ್ತಂಭಿಸಿದೆಯೆಂದೂ ಗೊತ್ತಾಗಿಯೇ ಬಂದೆನು. ನಿನ್ನ ಕುಮಾರನು ಬದುಕಬೇಕೆಂದು ಯಾರು ಕೋರಿಕೊಂಡರೂ ಬದುಕುತ್ತಾನೆ. ಬೇರೆ ವೈದ್ಯವೇ ಬೇಡ" ಎಂದನು ಬೌದ್ಧ ಸನ್ಯಾಸಿ.

"ಅದೇನು ಸ್ವಾಮಿ? ನನ್ನ ಮಗನು ಬದುಕಬೇಕೆಂದು ಕೋರದಿರುವವರು ಈ ದೇಶದಲ್ಲಿ ಯಾರೂ ಇಲ್ಲ. ಎಲ್ಲರೂ ಅವನ ಆಯುರಾರೋಗ್ಯವನ್ನೇ ಬಯಸುತ್ತಾರೆ. ನಾವೂ ಅಷ್ಟೇ" ಎಂದನು ರಾಜ.

"ಹಾಗೆ ನೆನೆದ ಮಾತ್ರಕ್ಕೆ ಏನಾದೀತು? ರಾಜಕುಮಾರನು ಬದಕಬೇಕೆಂದು ಬಯಸುವವರು ತಮ್ಮ ಆಯುಷ್ಯವನ್ನು ಅವನಿಗೆ ಧಾರೆಯೆರೆದು ಕೊಡಬೇಕು. ಅವನಿಗೆ ಬದಲು ತಾವು ಸಾಯಲು ತಯಾರಾಗಬೇಕು" ಎಂದನು ಬೌದ್ಧ ಸನ್ಯಾಸಿ.

ಬೌದ್ಧ ಸನ್ಯಾಸಿಯ ಮಾತು ಕೇಳಿದ ಕೂಡಲೇ ಎಲ್ಲರಿಗೂ ಮೌನಮುಡಿದ ಹಾಗಾಯಿತು. ಎಲ್ಲರ ಮನಸ್ಸಿನೊಳಗೂ ಆಲೋಚನೆ ತಿರುಗ ತೊಡಗಿತು. ರಾಜನು ತನ್ನೊಳಗೆ ಹೀಗೆಂದುಕೊಂಡನು:

"ಒಬ್ಬರ ಆಯುಷ್ಯವನ್ನು ಇನ್ನೊಬ್ಬರಿಗೆ ಧಾರೆಯೆರೆದು ಕೊಡುವುದು ಸಾಧ್ಯವಾಗುವ ಮಾತೆ? ಇದನ್ನು ನಂಬಬಹುದೇ? ಒಂದು ವೇಳೆ ಇದು ನಿಜವೇ ಆಗಿದ್ದು, ನನ್ನ ಆಯುಷ್ಯವನ್ನು ನಾನು ನನ್ನ ಮಗನಿಗೆ ಧಾರೆಯೆರದು ಕೊಟ್ಟೆನೆಂದುಕೊಳ್ಳುವ. ಆಗ ನಾನು ಸತ್ತು ಹೋಗಿ ಈ ಹುಡುಗ ಬೆಳೆದು ರಾಜ್ಯಭಾರಕ್ಕೆ ಬರುವಾಗ, ಅನೇಕ ವರ್ಷಗಳಾಗುತ್ತವೆ. ಅಷ್ಟರವರೆಗೂ ರಾಜ್ಯಭಾರ ವಹಿಸುವವರು ಯಾರು? ನಾನು ಇಲ್ಲದಾದ ಮರುಕ್ಷಣದಿಂದ ಅವನ ಸುತ್ತಲೂ ಎಷ್ಟೆಲ್ಲ ದುಸ್ತಂತ್ರಗಳು ಹೆಣೆಯಲ್ಪಡುತ್ತವೋ? ಆಗ ನನ್ನ ಮಗನಿಗಾಗಿ ನಾನು ಪ್ರಾಣಕೊಟ್ಟದ್ದೇ ನಿರರ್ಥಕವೆನಿಸುತ್ತದೆ".



ರಾಣಿ ತನ್ನೊಳಗೆ ಹೀಗೆ ಹೇಳಿಕೊಂಡಳು :

"ನನ್ನ ಈ ಮುದ್ದು ಕಂದನು ನನ್ನ ಆಯುಷ್ಯವನ್ನು ಪಡೆದು ಬದುಕಿದರೆ ನನಗೆ ಸಂತೋಷವೇ ಹೌದು. ಆದರೆ ನಾನು ಸತ್ತು ಹೋದ ಮರುಕ್ಷಣದಲ್ಲೇ ಮಹಾರಾಜನು ಇನ್ನೊಂದು ಮದುವೆ ಮಾಡಿಕೊಳ್ಳುತ್ತಾನೆ. ನನ್ನ ಮಗನಿಗೆ ಮಲತಾಯಿ ಬರುತ್ತಾಳೆ. ರಾಜನು ಹೊಸ ಹೆಂಡತಿಗೆ ದಾಸನಾಗಿ ನನ್ನ ಮಗನ ವಿಷಯವನ್ನು ಹಚ್ಚಿಕೊಳ್ಳುವುದನ್ನೇ ಬಿಡುತ್ತಾನೆ. ಇವನಿಗೆ ತಮ್ಮಂದಿರೂ ಹುಟ್ಟುತ್ತಾರೆ. ರಾಜ್ಯಕ್ಕಾಗಿ ಎಂತೆಂತಹ ಅನ್ಯಾಯ ಅನಾಚಾರಗಳು ನಡೆಯುತ್ತವೋ ! ನಾನು ಸತ್ತು ನನ್ನ ಮಗನಿಗೆ ನನ್ನ ಆಯುಷ್ಯ ಕೊಡುವುದರಿಂದ ಏನು ಲಾಭವಾದ ಹಾಗಾಯಿತು ? ಬದುಕಿದ್ದರೆ ಇನ್ನೂ ಮಕ್ಕಳನ್ನು ಹಡೆಯುವ ವಯಸ್ಸು ನನ್ನದು! ಇನ್ನೂ ಮುದುಕಿಯಾಗಲಿಲ್ಲ ನಾನು !"

ಮಂತ್ರಿಯ ಮನಸ್ಸಿನಲ್ಲಿ ಹೀಗೆ ಆಲೋಚನೆ ಸಾಗುತಿತ್ತು :

"ಈ ರಾಜನನ್ನೂ ರಾಜ್ಯವನ್ನೂ ನಾನು ಸಾವಿರ ಕಣ್ಣುಗಳಿಂದ ನೋಡುತ್ತಿರುವುದರಿಂದಲೇ ಸರಿಯಾಗಿದೆ. ರಾಜಕುಮಾರನಿಗಾಗಿ ನಾನು ನನ್ನ ಪ್ರಾಣವನ್ನು ಬಲಿಗೊಟ್ಟು ಬಿಟ್ಟರೆ, ಮರುಕ್ಷಣದಲ್ಲೇ ರಾಜ್ಯವೇ ತಲೆಕೆಳಗಾದೀತು. ಈ ದೇಶವನ್ನು ಕ್ಷಣ ಮಾತ್ರದಲ್ಲಿ ಶತ್ರುಗಳು ವಶಪಡಿಸಿಕೊಳ್ಳುತ್ತಾರೆ. ಈಗ ಸುತ್ತು ಮುತ್ತಣ ದೇಶಗಳಲ್ಲಿ ನನ್ನ ಸಾಮರ್ಥ್ಯವನ್ನು ಕುರಿತೇ ಮಾತಾಡಿಕೊಳ್ಳುತ್ತಿದ್ದಾರೆಯೇ ಹೊರತು ರಾಜನ ದಕ್ಷತೆಯನ್ನು ಕುರಿತು ಯಾರಿಗೇನು ಗೊತ್ತಿದೆ ? ನನ್ನ ಕೀರ್ತಿ ಹೆಚ್ಚಾಗುತ್ತಾ ಇರುವಾಗ, ನಾನು ಈ ಎಳೆಕಾಯಿಗಾಗಿ ಪ್ರಾಣವನ್ನು ಕೊಡುವುದು ಅವಿವೇಕವಾದೀತು ".

ಸೇನಾಪತಿ ಏನೆಂದು ಯೋಚಿಸುತ್ತಿದ್ದನೆಂದರೆ : "ನಾನು ರಾಜನಿಗಾಗಿ ಯಾವ ಕ್ಷಣಕ್ಕಾದರೂ ಸಾಯಲು ಸಿದ್ಧನಾದವನು. ಇಂತಹ ನನಗೆ ಬರಬೇಕಾದುದು ವೀರಮರಣವೇ ಹೊರತು ಬಲಿದಾನಗಳಂತಹವಲ್ಲ. ರಾಜಕುಮಾರನ ಸನ್ನಿಹಿತರಾದವರೆಲ್ಲರೂ ಮೌನವಾಗಿರುವಾಗ, ಮಧ್ಯೆ ನಾನೇಕೆ ತಲೆಹಾಕಲಿ ?"

ಇನ್ನೂ ಆಸ್ಥಾನದಲ್ಲಿರುವ ದೊಡ್ಡ ದೊಡ್ಡ ಪದವಿ, ಉದ್ಯೋಗಸ್ಥರಿಗೆಲ್ಲಾ ರಾಜಕುಮಾರನು ಬದುಕಿದರೂ, ಬದುಕದೇ ಹೋದರೂ ಒಂದೇ. ಮರ್ಯಾದೆಗಾಗಿ ಚಿಂತೆಯನ್ನು ನಟಿಸಿಕೊಂಡಿದ್ದರು.

ಮನಸ್ಸಿನೊಳಗಿನ ತುಮುಲದೊಂದಿಗೆ ಎಲ್ಲರೂ ಮೌನವಾಗಿರುವುದನ್ನು ಬೌದ್ಧ ಸನ್ಯಾಸಿ ಸ್ವಲ್ಪ ಹೊತ್ತು ನೋಡಿ, ಆಮೇಲೆ ರಾಜನನ್ನು ಕುರಿತು, "ನೋಡಿದೆಯಾ ರಾಜಾ ! ನೀನು ತಪ್ಪಾಗಿ ಹೇಳಿದೆ. ನಿನ್ನ ಮಗನು ಬದುಕಬೇಕೆಂದು ಬಯಸುವವನು ಇಲ್ಲಿ ಒಬ್ಬರೂ ಇಲ್ಲ ! ಮುಗಿಯಿತು ನನ್ನ ಕೆಲಸ." ಎಂದು ಹೇಳಿ ಅಲ್ಲಿಂದ ಹೋಗಿಬಿಟ್ಟನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಈಗ ಹೇಳು. ಆ ರಾಜಕುಮಾರನು ಸಾಯುವನೇನೋ ಎಂದು ವ್ಯಸನಪಡುತ್ತಿದ್ದವರಲ್ಲಿ ಒಬ್ಬನಾದರೂ ತನ್ನ ಆಯುಷ್ಯವನ್ನು ಅವನಿಗೆ ಕೊಡಲು ಮುಂದೆ ಬಾರದಿರಲು ಕಾರಣವೇನು? ಉಳಿದವರದೆಲ್ಲ ನಟನೆ ಅಂದುಕೊಂಡರೂ, ತಂದೆ ತಾಯಿಗಳು ಕೂಡಾ ತಮ್ಮ ಆಯುಷ್ಯವನ್ನು ತಮ್ಮ ಮಗನಿಗೆ ಕೊಡಲು ಸಿದ್ಧರಾಗದೆ ಹೋದರು. ಹಾಗಾದರೆ ಅಪೇಕ್ಷೆಗಳೂ, ಅಂತಃಕರಣಗಳೂ ವಾಸ್ತವಲ್ಲವೇನು? ಎಲ್ಲರದೂ ಮೋಸದ ಜೀವಿತ ವೇನಾ? ಈ ಸಂದೇಹಕ್ಕೆ ಸಮಾಧಾನ ತಿಳಿದೂ ಹೇಳದೆಹೋದರೆ ತಲೆಯೊಡೆದು ಸಾಯುವಿ!" ಎಂದು ಸುಮ್ಮನಾಯಿತು.

ಕೂಡಲೇ ತ್ರಿವಿಕ್ರಮನು ಹೀಗೆ ಉತ್ತರ ಕೊಟ್ಟನು: "ಮಾನವರ ಅಪೇಕ್ಷೆಗಳೂ ಅಂತಃಕರಣ ಭಾವನೆಗಳೂ ವಾಸ್ತವವಾದುವೇ. ಪ್ರಪಂಚದಲ್ಲಿ ಒಬ್ಬರಿಗಾಗಿ ಮತ್ತೊಬ್ಬರು ದುಃಖಿಸುವುದೂ, ಒಬ್ಬರ ಸಂತೋಷವನ್ನು ಇನ್ನೊಬ್ಬರು ಹಂಚಿಕೊಳ್ಳುವುದೂ, ಮಕ್ಕಳ ಮೇಲೆ ಹೆತ್ತವರ ಪ್ರೇಮಾಭಿಮಾನಗಳೂ, ಗಂಡ ಹೆಂಡಿರೊಳಗಿನ ಮಮತಾನುರಾಗಗಳೂ ಇವೆಲ್ಲಾ ಬೆಲೆಯಿಲ್ಲದಂತಹ ಇರಬೇಕಾದ ಸಹಜ ಭಾವನೆಗಳೇ ಸರಿ. ಇವುಗಳಿಂದಲೇ ಜೀವನಕ್ಕೆ ಅಂದಚಂದಗಳುಂಟಾಗುತ್ತವೆ. ಮನುಷ್ಯರ ನಡುವೆಯಿರುವ ಪ್ರೇಮಬಂಧಗಳು ಜೀವಿತ್ವಬಂಧಗಳೇ ಆಗಿವೆ. ತಾಯಿ ತಂದೆಯರು ತಮ್ಮ ಜೀವಿತದ ಭಾಗಗಳಾಗಿಯೇ ಮಕ್ಕಳನ್ನು ಪ್ರೇಮಿಸುತ್ತಾರೆ. ಇನ್ನೊಬ್ಬರಿಗೆ ತನ್ನ ಜೀವವನ್ನು ಧಾರೆಯೆರೆಯುವುದೆಂದರೆ, ಅವರನ್ನು ಕೂಡಾ ತನ್ನ ಜೀವದೊಂದಿಗೇ ತ್ಯಾಗಮಾಡಿದಂತೆಯೇ ಆಗುತ್ತದೆ. ಆಮೇಲೆ ಅವರ ಸುಖ ದುಃಖಗಳೊಂದೂ ತನಗಿರುವುದಿಲ್ಲ. ಅದು ಪ್ರೇಮಭಾವ ಹೇಗಾದೀತು? ಒಬ್ಬನಿಗಾಗಿ ಇನ್ನೊಬ್ಬನು ಪ್ರಾಣತ್ಯಾಗ ಮಾಡುವುದೆಂದರೆ ಅದು ಉದ್ರೇಕದಿಂದ ಮಾಡುದ ಕೆಲಸ. ಬುದ್ಧಿಯಿಂದ ಆಲೋಚಿಸಿದರೆ ಅದಕ್ಕೆ ಯಾವ ಬೆಲೆಯೂ ಇರುವುದಿಲ್ಲ. ಉದಾಹರಣೆಗೆ, ರಾಜನೂ ರಾಣಿಯೂ ತಮ್ಮ ಆಯುರ್ದಾಯವನ್ನು ಧಾರೆಯೆರೆಯುವುದನ್ನು ಬುದ್ಧಿಯಿಂದ ಆಲೋಚಿಸಿಕೊಂಡರು. ಅದರಲ್ಲಿ ಸ್ವಾರ್ಥವೋ, ಕುತರ್ಕವೋ ಇವೆಯೆಂದು ಹೇಳಲು ಸಾಧ್ಯವೇ? ನಿಜ ತಾನೇ! ಆದುದರಿಂದ ಸಾಯುವವರೆಗೆ ಸಾಯದ ಹಾಗೆ ನೋಡಿಕೊಳ್ಳುವುದೇ ಉಳಿದವರ ಧರ್ಮ".

ಹೀಗೆ ರಾಜನಿಗೆ ಮೌನಭಂಗವಾದಾಗಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡ ತೊಡಗಿತು.



# ತಕ್ಕ ಪಾಠ

ಊರೊಳಗಿನವರ ಕೊಳೆಯಾದ ಬಟ್ಟೆಗಳನ್ನು ಒಯ್ದು ಒಗೆದು ತಂದುಕೊಟ್ಟು ಬದುಕಿಕೊಂಡಿದ್ದ, ರಂಗಪ್ಪ ಕತ್ತೆಗಳನ್ನು ಕೊಂಡುಕೊಂಡು, ಅವುಗಳನ್ನು ಮಾರುವ ವ್ಯಾಪಾರಕ್ಕಿಳಿದು, ಮೊದಲಿಗಿಂತ ಹೆಚ್ಚು ಸುಖವಾಗಿಯೇ ಬದುಕಿಕೊಂಡಿದ್ದ.

ಒಂದು ದಿನ ದೊಡ್ಡ ರೈತನಾದ ಸೋಮಯ್ಯನು ಅವನನ್ನು ಕರೆದು, "ಲೋ ರಂಗಪ್ಪ. ನೀನು ಕತ್ತೆಗಳನ್ನು ಅಲ್ಲೀ ಇಲ್ಲೀ ಕಟ್ಟಿ ಕಷ್ಟಪಡುವುದೇಕೆ? ಸುಬ್ಬಯ್ಯ ಸಾವುಕಾರನ ಮನೆಯ ಎದುರಿನಲ್ಲಿರುವ ನನ್ನ ಹಟ್ಟಿಯನ್ನು ಬಾಡಿಗೆ ಇಲ್ಲದೆಯೇ ನಿನಗೆ ಕೊಡುತ್ತೇನೆ. ಅಲ್ಲಿ ಹಾಯಾಗಿ ವ್ಯಾಪಾರ ಮಾಡು" ಎಂದನು.

ಸೋಮಯ್ಯನಿಗೂ ಸುಬ್ಬಯ್ಯನಿಗೂ ವೈರವೆಂಬ ಸಂಗತಿ ರಂಗಪ್ಪನಿಗೆ ಗೊತ್ತಿದ್ದರೂ, ಉಚಿತವಾಗಿ ಹಟ್ಟಿಯೊಂದು ಸಿಗುವುದೆಂಬ ಆಶೆಯಿಂದ ರಂಗಪ್ಪ ತನ್ನ ಕತ್ತೆಗಳನ್ನು ಅಲ್ಲಿ ಸೇರಿಸಿದನು. ಆ ಕತ್ತೆಗಳು ಹಗಲಲ್ಲಿ ಯಾವ ಗೊಡವೆಯನ್ನೂ ತೋರದೆ, ರಾತ್ರಿಯಾದ ಮೇಲೆ ಬೆಳತನಕ ಹುಚ್ಚುಚ್ಚಾಗಿ ಓಂಡ್ರಿಸುತ್ತ ಸುಬ್ಬಯ್ಯನ ಮನೆಯವರ ನಿದ್ದೆಯನ್ನು ಕೆಡಿಸುತಿದ್ದುವು. ಸುಬ್ಬಯ್ಯನು ರಂಗಪ್ಪನನ್ನು ಕರೆದು, ಕತ್ತೆಗಳನ್ನು ಬೇರೆಲ್ಲಿಗಾದರೂ ಒಯ್ಯಲು ಹೇಳಿದನು. ಧರ್ಮಕ್ಕೆ ಸಿಕ್ಕಿದ್ದನ್ನು ಬಿಡಲು ಮನಸ್ಸಿಲ್ಲದೆ, ಅದೆಲ್ಲಾ ಸಾಧ್ಯವಿಲ್ಲವೆಂದು ಮೂರ್ಖವಾಗಿ ಹೇಳಿಬಿಟ್ಟನು ರಂಗಪ್ಪ.

ಮತ್ತೆ ಕೆಲವು ದಿನಗಳಲ್ಲಿ ವಿಪರೀತ ಮಳೆಗಾಳಿಗಳ ರಭಸಕ್ಕೆ ತಾಳಲಾಗದೆ ಕೊಟ್ಟಿಗೆ ಜರಿದು ಬಿದ್ದು ನಾಲ್ಕು ಕತ್ತೆಗಳು ಸತ್ತವು. ರಂಗಪ್ಪ ಕುಯ್ಯೋ ಮುರ್ಯೋ ಬೊಬ್ಬಿಟ್ಟು, ಶವಗಳನ್ನು ಹೊರಗೆ ಎಳೆಸಿ ಹಾಕಲು ಹಣಕ್ಕಾಗಿ ಚಂದಾ ಎತ್ತುತ್ತ, ಸುಬ್ಬಯ್ಯನ ಬಳಿಗೂ ಬಂದು ಕೈ ಚಾಚಿದನು.

ಸುಬ್ಬಯ್ಯ ತುಂಬಾ ಸಹಾನುಭೂತಿ ತೋರಿಸಿ, ರಂಗಪ್ಪನಿಗೆ ನಲುವತ್ತು ರೂಪಾಯಿ ಕೊಟ್ಟನು. ರಂಗಪ್ಪ ಆಶ್ಚರ್ಯದಿಂದ, "ಸತ್ತಕತ್ತೆಗಳನ್ನು ಎಳೆದು ಹಾಕಲಿಕ್ಕೆ ನಾಲ್ಕೈದು ರೂಪಾಯಿಗಳೇ ಸಾಕಲ್ಲಾ? ನಲುವತ್ತು ಕೊಟ್ಟಿರೇಕೆ?" ಎಂದನು.

"ಪರವಾಗಿಲ್ಲ. ಇಟ್ಟುಕೋ. ಮತ್ತೆ ಹೊಸ ಕತ್ತೆಗಳನ್ನು ಕೊಂಡಕೊಳ್ಳದಿರುವಿಯಾ? ಗಾಳಿ ಮಳೆಬಾರದಿರುತ್ತೆಯೆ?" ಎಂದ ಸುಬ್ಬಯ್ಯ.

ದೊಡ್ಡವರ ತಾಕಲಾಟದೊಳಗೆ ತಲೆ ತೂರಿಸಿದ್ದಕ್ಕೆ ತಕ್ಕ ಪಾಠವಾಯಿತೆಂದುಕೊಂಡು ಉಳಿದ ಕತ್ತೆಗಳನ್ನು, ಬೇರೊಂದೆಡೆಗೆ ಕೊಂಡೊಯ್ದು, ತನ್ನ ವ್ಯಾಪಾರವನ್ನು ಮತ್ತೆ ಪ್ರಾರಂಭಿಸಿದನು ರಂಗಪ್ಪ.





# ಮುಖಭಂಗ

ಕನಕಪುರವೆಂಬಲ್ಲಿ ಹಿಂದೆ ಒಬ್ಬರು ಜಮೀನ್ದಾರರಿದ್ದರು. ಅವರಿಗೆ ತಾನೊಬ್ಬ ದೊಡ್ಡ ಆಸ್ತಿವಂತನೆಂಬ ಹೆಮ್ಮೆ ತುಂಬಾ ಇತ್ತು, ಅದರ ಜತೆಯಲ್ಲಿ ನಾಲ್ಕುಮಂದಿಗಳ ಮುಂದೆ ತಾನೊಬ್ಬ ದೊಡ್ಡ ದಾನಶೂರನೆಂದು ಹೆಸರು ಪಡೆಯಬೇಕೆಂಬ ಆಶೆಯೂ ಇತ್ತು. ಆ ಕಾರಣದಿಂದ ಅವರು ಹತ್ತುಮಂದಿಗಳೊಂದಿಗೆ ಇರುವಾಗ, ಯಾರಾದರೂ ಬಂದು ಏನಾದರೂ ಕಷ್ಟ ಹೇಳಿಕೊಂಡರೆ ಸಾವಧಾನವಾಗಿ ಕೇಳಿಕೊಳ್ಳುವರು. ಸಹಾಯಕ್ಕಾಗಿ ಕೈ ಚಾಚಿದರೆ, "ಇಲ್ಲಿ ಏನೂ ಇಟ್ಟುಕೊಳ್ಳಲಿಲ್ಲವಯ್ಯ. ಮನೆಗೆ ಬಂದು ಬಿಡು. ನಿನಗೆ ಬೇಕಾದುದನ್ನು ಒಯ್ಯುವಿಯಂತೆ" ಎನ್ನುವರು ಧಾರಾಳವಾಗಿ.

ಅವರ ಆ ರೀತಿಯನ್ನೂ ಮಾತನ್ನೂ ಕೇಳುವಾಗ ಅವರ ಕೈಗೆ ಎಲುವುಗಳೇ ಇಲ್ಲವೇನೋ ಅನಿಸುತ್ತದೆ. ಆದರೆ ನಿಜವಾದ ಗುಟ್ಟು ಬೇರೆಯೇ ಇತ್ತು. ಯಾಚಕನು ಅವರು ಹೇಳಿದ ಮಾತನ್ನು ನಂಬಿ ಮನೆಗೆ ಹೋಗಿ ಕೇಳಿದರೆ, ಜಮೀನ್ದಾರರ ಮೊಂಡುಗೈಯೇ ಇದಿರಾಗಿ ಝಾಡಿಸಿ ಬಿಡುತ್ತಿತ್ತು. "ಏನೋಯ್ ! ನಿನಗೆ ಬುದ್ಧಿಗಿದ್ದಿ ಇದೆಯೋ ? ಸಮಯ ಸಂದರ್ಭ ನೋಡದೆ ನಾನು ಹತ್ತು ಮಂದಿಯ ನಡುವೆ ಇರುವಾಗ ಹಾಗೆಲ್ಲಾ ಹೇಳಿ ಕೇಳುವುದೇನು ? ಇನ್ನೊಂದುಸಾರಿ ಹೀಗೆ ಮಾಡಿದರೆ, ನಾನು ನಿನಗೆ ಏನೂ ಕೊಡದೆ ಸುಮ್ಮನೆ ಕಳುಹಿಸಿಬಿಟ್ಟೆನೆಂದು ಎಲ್ಲಿಯಾದರೂ ಹೇಳಿದರೆ, ನಿನ್ನ ಸುತ್ತುಮುತ್ತಲೂ ನಿನಗೆ ನೀರು ಕೂಡಾ ಸಿಕ್ಕದು. ಜಾಗ್ರತೆ !" ಎಂದು ಹೆದರಿಸಿ ಕಳುಹಿಸುವರು.

ಆ ಬಡಸಹಾಯಾರ್ಥಿ ಭವ್ಯಭರ್ತಿ ಮೂರ್ತಿಗಳಾದ ಜಮೀನ್ದಾರರ ಬೆದರಿಕೆಯ ಮಾತುಗಳನ್ನು ಕೇಳಿ ಕಿಂಕಂ ಅನ್ನದೆ ಹೋಗಿ ಬಿಡುವನು. ಅಷ್ಟೇ ಅಲ್ಲದೆ ಅವರು ಹಾಗೆ ಗದರಿಸಿದರೆಂದು ಯಾರೊಡನೆಯೂ ಹೇಳುತ್ತಿರಲಿಲ್ಲ. ಈ ಸಂಗತಿಗಳನ್ನು ತಿಳಿಯದ ಜನರು ಜಮೀನ್ದಾರರನ್ನು ದೊಡ್ಡ ದಾತಾರರೆಂದೇ ತಿಳಿದು, ಊರೊಳಗಿನ ದೇವಾಲಯಗಳ ಉತ್ಸವಗಳಿಗೂ, ಶುಭಕಾರ್ಯಗಳಿಗೂ ಗೌರವದಿಂದ ಆಹ್ವಾನಿಸಿ ಮರ್ಯಾದೆ ತೋರಿಸುತ್ತಿದ್ದರು. ಮಾತ್ರವಲ್ಲ, ಅವರ ಕೆಲಸಗಳನ್ನು ತಮ್ಮ ಮೇಲೆ ಹಾಕಿಕೊಂಡು ಕಷ್ಟನಷ್ಟಗಳನ್ನು ಕೂಡ ತಾವೇ ತಾಳಿ ಕೊಳ್ಳುತ್ತಿದ್ದರು.

**ಬಿ. ಎ. ರಾವು**

ಒಂದು ದಿನ ಪಕ್ಕದ ಊರಿನಲ್ಲಿದ್ದ ವೆಂಕಯ್ಯನೆಂಬ ರೈತನು ಬಡತನದಿಂದ ಬಹಳ ಕಷ್ಟಪಡುತ್ತ, ಹೆಂಡತಿ ಮಕ್ಕಳನ್ನೂ ಪೋಷಿಸಲಾಗದೆ. ದಾತರೆಂದು ಹೆಸರು ಪಡೆದ ಕನಕಪುರೀ ಜಮೀನ್ದಾರರ ಸಹಾಯ ಕೇಳಲು ಬಂದನು. ಆ ಸಮಯದಲ್ಲಿ ಜಮೀನ್ದಾರರು ಗ್ರಾಮದ ಕಟ್ಟೆಯಲ್ಲಿ ಊರೊಳಗಿನ ಆಗು ಹೋಗುಗಳನ್ನು ಕುರಿತು ಮಾತಾಡಿಕೊಂಡಿದ್ದರು. ಸುತ್ತಲೂ ಜನರು ಕೈಕಟ್ಟಿ ನಿಂತುಕೊಂಡು ಜಮೀನ್ದಾರರು ಹೇಳುವ ಮಾತುಗಳನ್ನು ಕೇಳುತ್ತಿದ್ದರು.

ಸಮಯ ಸಾಧಿಸಿ ವೆಂಕಯ್ಯನು ಮುಂದೆ ಹೋಗಿ ವಿನಯದಿಂದ ಕೈ ಜೋಡಿಸಿ, ತನ್ನ ಬಡತನದ ಬನ್ನವನ್ನು ಕುರಿತು ನಿವೇದಿಸಿಕೊಂಡನು. ಜಮೀನ್ದಾರರು ದಯೆಯಿಂದ ಅವನು ಹೇಳುವುದನ್ನು ಆಲಿಸಿ, ಕನಿಕರ ತೋರುತ್ತ, "ಏನಪ್ಪಾ, ಇಷ್ಟೆಲ್ಲಾ ಕಷ್ಟ ಮೈಮೇಲೆ ಪೂರ್ತಿ ಬಿದ್ದ ಮೇಲೇನಾ ನನ್ನ ಹತ್ತಿರ ಬರೋದು? ಮೊದಲೇ ಏಕೆ ಬಾರದೆ ಹೋದೆ? ಪರವಾಗಿಲ್ಲ ಬಿಡು, ಈಗಾದರೂ ಬಂದೆಯಲ್ಲ? ಸಾಯಂಕಾಲ ಮನೆಗೆ ಬಂದು ಒಂದು ಕರೆಯುವ ಎಮ್ಮೆಯನ್ನು ತೆಗೆದುಕೊಂಡು ಹೋಗು" ಎಂದರು.

ಜಮೀನ್ದಾರರ ಉದಾರ ಬುದ್ಧಿಯನ್ನು ನೋಡಿ ವೆಂಕಯ್ಯನಿಗೆ ಪರಮಾನಂದವಾಯಿತು.

ಆ ದಿನ ಸಾಯಂಕಾಲ ವೆಂಕಯ್ಯ ಜಮೀನ್ದಾರರ ಮನೆಗೆ ಹೋದಾಗ, ಜಮೀನ್ದಾರರು ಬಾಗಿಲಲ್ಲೇ ನಿಂತು ಅವನನ್ನು ಕೋಪದಿಂದ ನೋಡುತ್ತ, "ಏನೋಯ್! ನಿನಗೆ ಬುದ್ಧಿಗಿದ್ಧಿ ಏನಾದರೂ ಇದೆಯೆ? ಹತ್ತುಮಂದಿ ಕೂಡಿರುವಾಗಲೇ ನಿನಗೆ ಸಮಯ ದೊರಕಿತೇನು? ಮನೆಗೆ ಬಂದು ಕೇಳಿದರೆ ಸಹಾಯ ಮಾಡಲಾರೆನೆಂದುಕೊಂಡು ತಾನೇ ಅಲ್ಲಿಗೆ ಬಂದು ಕೇಳಿದಿ? ನಿನಗೆ ಕರೆಯುವ ಎಮ್ಮೆ ದಾನ ಕೊಡಬೇಕೇನು? ಎಮ್ಮೆಗಳು ಆಕಾಶದಿಂದ ಕಳಚಿ ನನ್ನ ಅಂಗಳಕ್ಕೆ ಬೀಳುತ್ತವೇನು? ಹೋಗು ಹೋಗು! ಮತ್ತೆ ಈ ಕಡೆಗೆ ಮುಖ ತೋರಿಸಬೇಡ. ಈ ಸಂಗತಿಯನ್ನು ನೀನು ಯಾರ ಹತ್ತಿರವಾದರೂ, ಹೇಳಿದ್ದು ನನಗೆ ಗೊತ್ತಾಯಿತೆಂದರೆ ನಿನ್ನ ಶರೀರದಲ್ಲಿ



ಎಲುವು ಉಳಿಯಲಿಕ್ಕಿಲ್ಲ, ಜಾಗ್ರತೆ !" ಎಂದರು. ಹೀಗೆ ಹೇಳುವವರು ಜಮೀನ್ದಾರರೇ ಏನು ? ವೆಂಕಯ್ಯ ಬೆರಗಾಗಿ ಅವರನ್ನೊಮ್ಮೆ ನೋಡಿ, ಅಲ್ಲಿಂದ ಹೊರಟು ತನ್ನ ಮನೆಗೆ ಹೋಗಿಬಿಟ್ಟನು. ಬಡವನಾದರೂ ವೆಂಕಯ್ಯ ಸ್ವಾಭಿಮಾನಿಯಾಗಿದ್ದನು. ಕೊಡುತ್ತೇನೆಂದುದನ್ನು ಕೊಡದಿರುವುದರ ಮೇಲೆ, ಹೀನಾಮಾನವಾಗಿ ಮಾತಾಡಿ ಬೆದರಿಸಿ ಅವಮಾನ ಬೇರೆ ಪಡಿಸಿದ್ದಾರೆ ! ಅವನಿಗೆ ಬಹಳ ಸಂಕಟವಾಯಿತು.

ನಡೆದ ಸಂಗತಿ ಕೇಳಿ ವೆಂಕಯ್ಯನ ಹೆಂಡತಿ, "ಓಹೋ ! ಆ ಜಮೀನ್ದಾರ ಭೂಪನ ಅಸಲು ರೂಪ ಅಂದರೆ ಇದೇನಾ ! ಕೊಡುವೆನೆಂದು ಆಶೆ ಹುಟ್ಟಿಸಿದ್ದರಿಂದ ತಾನೇ ಹೋದದ್ದು ? ಮಾತು ತಪ್ಪಿದ ಪಾಪ ಸುಮ್ಮನೆ ಬಿಡದು " ಎಂದಳು.

ವೆಂಕಯ್ಯ ಆಲೋಚಿಸುತ್ತ ಬಹಳ ಹೊತ್ತು ಸುಮ್ಮನಿದ್ದು. ಏನೋ ಒಂದು ಉಪಾಯ ಹೊಳೆಯಲು ತಲೆಯಾಡಿಸುತ್ತ, "ಆ ಜಮೀನ್ದಾರ ಕೊಡುವ ಎಮ್ಮೆಯಿಂದ ನಮ್ಮ ದಾರಿದ್ರ್ಯ ತೀರಿ ಹೋಗುತ್ತದೆಂದು ನಾನೇನೂ ನಂಬಲಿಲ್ಲ. ಆದರೆ ದಾನಕೊಡುವುದನ್ನು ಬಿಟ್ಟು ಹೀಗೆ ಅವಮಾನ ಪಡಿಸಿದವರನ್ನು ಸುಮ್ಮನೆ ಬಿಡಬಾರದು. ಅವರಿಗೊಂದು ಬುದ್ಧಿ ಕಲಿಸಿಯೇ ಬಿಡಬೇಕು " ಎಂದನು ಹೆಂಡತಿಯೊಂದಿಗೆ.

ಮರುದಿನ ಸಾಯಂಕಾಲ ವೆಂಕಯ್ಯ ಜಮೀನ್ದಾರರ ಪಶುಗಳು ಮೇಯುವ ಹುಲ್ಲುಗಾವಲಿಗೆ ಹೋಗಿ, ಒಳ್ಳೆಯ ಎರಡು ಎಮ್ಮೆಗಳನ್ನು ಹೊಡೆದುಕೊಂಡು, ಜಮೀನ್ದಾರರು ಗೋಷ್ಠಿ ನಡೆಸುವ ಗ್ರಾಮದ ಕಟ್ಟೆಯ ಹತ್ತಿರ ಬಂದನು. ಅದನ್ನು ನೋಡಿದ ಪಶುಗಳ ಕಾವಲುಗಾರನು ವೆಂಕಯ್ಯ ಎರಡು ಎಮ್ಮೆಗಳನ್ನು ಕದ್ದುಕೊಂಡು ಹೋಗುತ್ತಿದ್ದಾನೆಂದು ದೂರುಹೇಳಲು ಅಲ್ಲಿಗೇ ಬಂದನು. ಆ ಸಮಯಕ್ಕೆ ಗ್ರಾಮದ ಕಟ್ಟೆಯ ಮೇಲೆ ಕುಳಿತುಕೊಂಡಿದ್ದ ಜಮೀನ್ದಾರರ ಸುತ್ತಲೂ ಅನೇಕ ಮಂದಿ ಗ್ರಾಮಸ್ಥರು ನಿಂತುಕೊಂಡಿದ್ದರು. ಜಮೀನ್ದಾರರು ಏನೋ ಹೇಳುತ್ತಿದ್ದರು. ಅವರ ಮುಂದೆ ಮೊದಲು ವೆಂಕಯ್ಯನೂ, ಸ್ವಲ್ಪ ಹಿಂದೆ ಪಶುಗಳ ಕಾವಲುಗಾರನೂ ಬಂದರು,

ವೆಂಕಯ್ಯ ಜಮೀನ್ದಾರರಿಗೆ ನಮಸ್ಕಾರ ಮಾಡಿ, "ಅಯ್ಯಾ ಮಹಾ ಸ್ವಾಮಿ ! ತಾವು ದಯಮಾಡಿ ಅನುಗ್ರಹಿಸಿದ ಈ ಎಮ್ಮೆಗಳನ್ನು ಕದ್ದುಕೊಂಡೆ ನೆನ್ನುತ್ತಾನೆ ನಿಮ್ಮ ಕಾವಲುಗಾರ. ನಿನ್ನೆ ಸಾಯಂಕಾಲ ತಾವು ನನಗೆ ಈ ಎಮ್ಮೆಗಳನ್ನು ಅನುಗ್ರಹಿಸಿದಿರಷ್ಟೇ? ಅದು ಇವನಿಗೆ ತಿಳಿಯದೆ ನನ್ನನ್ನು ಕಳ್ಳಾ ಅನ್ನುತ್ತಾನೆ. ತಾವೇ ಅವನಿಗೆ ಹೇಳಬೇಕು " ಎಂದನು.

ಜಮೀನ್ದಾರರ ಕಂಠದಲ್ಲಿ ಬೇವಿನ ರಸ ಇಳಿದ ಹಾಗಾಯಿತು.





# ಉತ್ತಮ ಕಾಣಿಕೆ

ಇಟಲಿಯ ಸಿಸಲೀ ನಗರ ಪರಿಸರದ ಒಂದು ಗ್ರಾಮದಲ್ಲಿ ಇಬ್ಬರು ರೈತರು ಸ್ನೇಹದಿಂದಿದ್ದರು. ವಿಚಿತ್ರವೇನೆಂದರೆ ಇಬ್ಬರ ಪತ್ನಿಯರೂ ಒಂದೇ ದಿನ ಒಂದೇ ವೇಳೆಯಲ್ಲಿ ಮಕ್ಕಳನ್ನು ಹಡೆದರು. ಅದರಿಂದ ಇಬ್ಬರೂ ಸಂತೋಷಿತರಾಗಿ ತಮ್ಮ ಮಕ್ಕಳ ನಾಮಕರಣವನ್ನು ಒಟ್ಟಿಗೇ ಮಾಡಿ ಬಿಡೋಣವೆಂದುಕೊಂಡು ಹಾಗೆಯೇ ಏರ್ಪಾಡು ಮಾಡಿದರು. ಒಂದು ಮಗುವಿಗೆ ಫ್ರಾಂಕೋ ಎಂದೂ ಇನ್ನೊಂದು ಮಗುವಿಗೆ ಜಿರಾಲ್ಡೋ ಎಂದೂ ಹೆಸರಿಡಲು ನಿಶ್ಚಯಿಸಿದರು. ಹೀಗೆ ಮಕ್ಕಳಿಗೆ ನಾಮಕರಣ ಮಾಡುವ ಸಂದರ್ಭದಲ್ಲಿ ಇಬ್ಬರು ದೇವತೆಗಳು ಬಂದು ಆಶೀರ್ವದಿಸುವರೆಂಬ ನಂಬುಗೆ ಅವರೊಳಗಿತ್ತು. ಆದುದರಿಂದ ನಾಮಕರಣ ಸಮಾರಂಭದ ಊಟದ ಮೇಜುಗಳ ಮುಂದೆ ಎರಡು ಕುರ್ಚಿಗಳನ್ನು ಖಾಲಿಯಾಗಿ ಬಿಡುತ್ತಿದ್ದರು.

ಔತಣದ ಭೋಜನ ಆನಂದವಾಗಿ ನಡೆಯುತ್ತಿರಲು, ಮುಗಿಯುವ ಸ್ವಲ್ಪ ಹೊತ್ತಿನ ಮೊದಲು, ಖಾಲಿ ಕುರ್ಚಿಯಲ್ಲಿ ಇಬ್ಬರು ದೇವತೆಯರು ಪ್ರತ್ಯಕ್ಷರಾದರು. ಇಬ್ಬರು ದೇವತೆಯರಲ್ಲಿ ಒಬ್ಬಳು ವೃದ್ಧೆ. ಅವಳು ಸುಂದರವಾದ ಕಿರುನಗೆಯ ಮುಖದೊಂದಿಗೆ ಫ್ರಾಂಕೋನ ತಾಯಿಯ ಹತ್ತಿರ ಕುಳಿತಿದ್ದಳು. ಎರಡನೇ ದೇವತೆ ಯೌವನದವಳಾಗಿದ್ದು, ಜಿರಾಲ್ಡೋನ ತಾಯಿಯ ಪಕ್ಕದ ಕುರ್ಚಿಯಲ್ಲಿದ್ದಳು.

ವೃದ್ಧ ದೇವತೆ ಫ್ರಾಂಕೋನ ಮೇಲೆ ಅಂಗೈಯನ್ನಿಟ್ಟು, "ಈ ಕಂದ ನಿತ್ಯವೂ ಚೆಂದಾಗಿ ಬೆಳೆಯುತ್ತಾ ನಿತ್ಯವೂ ಸಂತೋಷವಾಗಿರುವಂತೆ ಆಶೀರ್ವಾದ ಮಾಡಿ, ಈ ವಿಚಿತ್ರ ವೇಣುವನ್ನು ಇವನಿಗೆ ಕಾಣಿಕೆ ಕೊಡುತ್ತೇನೆ. ಈ ವೇಣುವನ್ನು ಇವನು ಯಾವಾಗ ಊದಿದರೂ ಎಲ್ಲಾ ಚಿಂತೆಗಳನ್ನೂ ಮರೆತು ಸಂತೋಷವಾಗಿರುತ್ತಾನೆ! ಅದನ್ನು ಕೇಳುವವರಿಗೂ ಸಂತೋಷ" ಎಂದಳು.

ಎರಡನೇ ದೇವತೆ ಜಿರಾಲ್ಡೋನ ತಲೆಯ ಮೇಲೆ ಕೈಯಿಟ್ಟು, "ನಾನು ಜಿರಾಲ್ಡೋ ಕಂದನಿಗೆ ಈಚೀಲನ್ನು ಕಾಣಿಕೆ ಕೊಡುತ್ತೇನೆ. ಹಣ ಬೇಕಾಗಿ ಬಂದಾಗ ಇದರೊಳಗೆ ಕೈ ಹಾಕಿ ತಾಮ್ರಾ ಬೆಳ್ಳಿ ಚಿನ್ನಾ ಅಂದರೆ ಮೂರು ಬಂಗಾರದ ನಾಣ್ಯಗಳು ಸಿಗುತ್ತವೆ. ಹೀಗೆ ದಿನಕ್ಕೆ ಒಂದುಸಾರಿ ಮಾತ್ರ

**ಇಟಲೀ ಜಾನಪದ ಕಥೆ**

ಸಿಗುತ್ತವೆ" ಎಂದಳು. ಜಿರಾಲ್ಡೋನ ತಾಯಿ ತಂದೆಯರಿಗೆ ತುಂಬಾ ಸಂತೋಷವಾಯಿತು. ಫ್ರಾಂಕೋನ ತಾಯಿ ತಂದೆಯರಿಗೆ ಮಾತ್ರ ತುಂಬಾ ನಿರಾಶೆಯಾಯಿತು ಪಾಪ! ದಿನಾ ಸಂತೋಷ ವಾಗಿರುವುದರಿಂದ ಲಾಭವೇನೂ ಇಲ್ಲವೆಂದು, ಆ ಸಂತೋಷವನ್ನು ತಿಂದು ಹೊಟ್ಟೆ ತುಂಬಿಸಲು ಸಾಧ್ಯವಿಲ್ಲವೆಂದು ಅವರಿಗೆ ಚಿಂತೆಯಾಯಿತು.

ಮಕ್ಕಳಿಬ್ಬರೂ ದೊಡ್ಡವರಾಗ ತೊಡಗಿದರು. ಇಬ್ಬರೂ ಅವರವರಿಗೆ ಸಿಕ್ಕಿದ ಕಾಣಿಕೆಗಳನ್ನು ವಿನಿಯೋಗಿಸಿಕೊಳ್ಳುತ್ತ ಸಂತೋಷವಾಗಿದ್ದರೂ, ಜಿರಾಲ್ಡೋನಿಗೆ ದಿನಾ ಲಭಿಸುವ ಬಂಗಾರದ ನಾಣ್ಯ ಗಳಿಂದ, ಆ ಮನೆಯವರು ದಿನೇ ದಿನೇ ಶ್ರೀಮಂತ ರಾಗುವುದನ್ನು ನೋಡಿ, ಫ್ರಾಂಕೋನ ತಾಯಿ ತಂದೆಯರಿಗೆ ಅಸೂಯೆಯಾಗುತ್ತಿತ್ತು. ಜಿರಾಲ್ಡೋನ ತಾಯಿ ತಂದೆಯರು ತಾವು ಶ್ರೀಮಂತರಾಗುವೆ ವೆಂಬ ಭಾವನೆಯಿಂದ ಫ್ರಾಂಕೋನ ಕುಟುಂಬ ವನ್ನು ನಿರ್ಲಕ್ಷ್ಯವಾಗಿ ನೋಡಲು ಪ್ರಾರಂಭಿಸಿದರು.

ಹೀಗೆ ಕಾಲ ಕಳೆಯುತ್ತಿರಲು ಮಹಾರಾಜನ ಸೈನಿಕ ಶಾಖೆಯಲ್ಲಿ ಈ ಯುವಕರಿಗೆ ಸೈನಿಕರಾಗಿ ಸೇರುವ ಅವಕಾಶ ಸಿಕ್ಕಿತು. ಹಾಗಿರುವಾಗ ಆ ರಾಜನೊಂದಿಗೆ ಯುದ್ಧಕ್ಕೆ ಬಂದ ಶತ್ರು ರಾಜನು ಫ್ರಾಂಕೋ ಮತ್ತು ಜಿರಾಲ್ಡೋರನ್ನು ಬಂದಿಗಳಾಗಿ ಹಿಡಿದು, ತನ್ನ ಅರಮನೆಯ ತೋಟದಲ್ಲಿ ಕೆಲಸ ಮಾಡಲು ಹಚ್ಚಿದನು.

ಫ್ರಾಂಕೋ ಖೈದಿಯಾಗಿದ್ದರೂ ತನ್ನ ಬಳಿಯ ಲ್ಲಿದ್ದ ವೇಣುವಿನಿಂದ ಅವನಿಗೇನೂ ಚಿಂತೆಯಾಗ ಲಿಲ್ಲ. ಬದಲಾಗಿ ಸಂತೋಷದಲ್ಲೇ ಇದ್ದನು. ಜಿರಾಲ್ಡೋ ಮಾತ್ರ ತನ್ನಲ್ಲಿರುವ ಕಾಣಿಕೆಯ ಚೀಲದಿಂದ ದಿನಾ ಬಂಗಾರದ ನಾಣ್ಯ ಪಡೆಯುವಂತಿದ್ದರೂ ಸುಖಸಂತೋಷಗಳಿಲ್ಲದೆ ಚಿಂತೆ ಯಿಂದ ಕೃಶನಾಗತೊಡಗಿದನು. ಒಂದು ದಿನ ಅವನು ರಾಜನ ಬಳಿಗೆ ಹೋಗಿ, ತನ್ನನ್ನು ಬಿಡುಗಡೆ ಮಾಡುವುದಾದರೆ ಎಷ್ಟು ಬಂಗಾರದ ನಾಣ್ಯಕೊಡ ಬೇಕು ಎಂದು ಕೇಳಿದನು. ಆ ಮಾತು ಕೇಳಿ ರಾಜನಿಗೆ



ನಗುಬಂತು. ಏನೋ ಗುಟ್ಟು ಇರಬೇಕೆಂದುಕೊಂಡು ರಾಜನು, "ಅರುವತ್ತು ಬಂಗಾರದ ನಾಣ್ಯ ಕೊಡಬೇಕು" ಎಂದನು.

"ಇಪ್ಪತ್ತು ದಿನಗಳಲ್ಲಿ ಅಷ್ಟು ನಾಣ್ಯಗಳನ್ನು ಕೊಡುತ್ತೇನೆ ಪ್ರಭೂ" ಎಂದನು ಜಿರಾಲ್ಡೋ. ರಾಜನಿಗೆ ಇನ್ನಿಷ್ಟು ಆಶ್ಚರ್ಯವಾಯಿತು. ಅದು ಹೇಗೆ ಸಂಪಾದಿಸುವನೋ ನೋಡಬೇಕೆಂದು, ಅವನ ಮೇಲೆ ಗೂಢಚಾರರನ್ನು ನಿಯಮಿಸಿದನು. ಜಿರಾಲ್ಡೋ ಮಂತ್ರ ಹೇಳಿ ಚರ್ಮದ ಚೀಲದಿಂದ ನಾಣ್ಯಗಳನ್ನು ತೆಗೆಯುವುದನ್ನು ಅವರು ನೋಡಿ, ರಾಜನೊಂದಿಗೆ ಅದನ್ನು ಹೇಳಿದರು. ಆ ವಿಚಿತ್ರ ಚೀಲದ ಲಾಭ ತನ್ನದಾದರೆ ತನ್ನಷ್ಟು ಐಶ್ವರ್ಯವಂತ ರಾಜನು ಬೇರಿಲ್ಲವೆನಿಸಿತು ರಾಜನಿಗೆ.

ಹೀಗಂದುಕೊಂಡು ರಾಜನು ಜಿರಾಲ್ಡೋನೊಂದಿಗೆ, "ನೀನು ಅರುವತ್ತಕ್ಕೆ ಅರುವತ್ತು ಪಾಲು ಹೆಚ್ಚು ಕೂಡಿಸಿಕೊಟ್ಟರೂ ಸಹ ನಿನ್ನನು ಬಿಡುವುದಿಲ್ಲ. ನೀನು ನಿನ್ನ ಚೀಲದಿಂದ ದಿನಾ ತೆಗೆಯುವ ಆ ನಾಣ್ಯಗಳನ್ನು ನನಗೆ ಕೊಡುತ್ತಾ ಇರಬೇಕು. ತಪ್ಪಿದರೆ ನೀನು ತೀವ್ರ ದಂಡನೆಯನ್ನು ಅನುಭವಿಸಬೇಕಾಗುತ್ತದೆ!" ಎಂದನು.

ಬೇರೆ ಉಪಾಯವಿಲ್ಲದೆ ಜಿರಾಲ್ಡೋ ಆ ಮಂತ್ರದ ಚೀಲದೊಳಗಿನಿಂದ, ತಾಮ್ರ ಬೆಳ್ಳಿ ಬಂಗಾರವೆನ್ನುತ್ತಾ, ಬಂಗಾರದ ಮೂರು ನಾಣ್ಯಗಳನ್ನು ದಿನಾ ತೆಗೆದು ರಾಜನಿಗೆ ಕೊಡುತ್ತಿರಬೇಕಾಯಿತು.

ಹೀಗಿರುವಾಗ ಆ ರಾಜನ ಮಗಳಿಗೆ ಏನೋ ಒಂದು ಕಾಯಿಲೆ ಶುರುವಾಯಿತು. ದಿನೇದಿನೇ ಹೆಚ್ಚಾಗುತ್ತಾ ಹೋಯಿತು ಆ ಕಾಯಿಲೆಯಿಂದ ರಾಜಕುಮಾರಿ ಕೃಶಳಾಗಿ ಬಾಡಿ ಅಳುವೋರೆಯಿಂದ ಮಲಗಿದಲ್ಲೇ ಇದ್ದಳು. ಹಸಿವಿಲ್ಲ, ರುಚಿಯಿಲ್ಲ. ಅದೇನು ರೋಗವೋ ವೈದ್ಯಶಿಖಾಮಣಿಗಳಿಗೆ ತಿಳಿಯಲೂ ಇಲ್ಲ. ಯಾವ ಮದ್ದೂ ಪ್ರಯೋಜನಕ್ಕೆ ಬರಲಿಲ್ಲ. ಕಡೆಗೆ ಮಂತ್ರಿ ಒಂದು ಆಲೋಚನೆ ಹೇಳಿದ. "ನಮ್ಮ ತೋಟದ ಕೆಲಸಮಾಡುವ ಖೈದಿ ಫ್ರಾಂಕೋ ಎಂಬವನು ಯಾವಾಗಲೂ ಆನಂದ



ವಾಗಿರುತ್ತಾನೆ. ಕೆಲಸ ಮಾಡುವಾಗಲೂ ವೇಣುನಾದ ವೇಳಿಸುತ್ತಾನೆ. ಅದನ್ನು ಕೇಳುವಾಗಲೇ ಹೇಳಲಾಗ ದಂಥ ಆನಂದವೆನಿಸುತ್ತದೆ. ಅವನ ನಾದವು ಕುಮಾರಿಯ ಮೇಲೆ ಏನು ಪರಿಣಾಮ ಬೀರು ವುದೋ ನೋಡೋಣ" ಎಂದನು.

ರಾಜನು ಕೂಡಲೇ ಫ್ರಾಂಕೋನನ್ನು ಕರೆಯಿಸಿ ರಾಜಕುಮಾರಿಯ ವಿಷಯವನ್ನು ಹೇಳಿದನು. ಫ್ರಾಂಕೋ ತನ್ನ ವೇಣುವನ್ನು ತೆಗೆದು ರಾಜ-ಕುಮಾರಿಯ ಮುಂದೆ ಊದತೊಡಗಿದನು. ಸ್ವಲ್ಪ ಹೊತ್ತಿನಲ್ಲಿ ಅವಳು ನಿಧಾನವಾಗಿ ಮುಗುಳುನಗು ಅರಳಿಸಿದಳು. ತಿನ್ನಲು ಏನಾದರೂ ಕೊಡುವಂತೆ ಕೇಳಿ ಎದ್ದು ಕುಳಿತಳು. ಮುಖದಲ್ಲಿ ಆರೋಗ್ಯದ ಕಳೆ ಬರತೊಡಗಿತು. ಒಂದೇ ದಿನದಲ್ಲಿ ಅವಳು ಎಂದಿನಂತಾದಳು.

ರಾಜನು ಅತ್ಯಂತ ಸಂತೋಷಪಟ್ಟು, ಫ್ರಾಂಕೋ ಮಾಡಿದ ಸಹಾಯಕ್ಕೆ ಕೃತಜ್ಞತೆಯಾಗಿ ಅವನನ್ನು ಸೆರೆಮನೆಯಿಂದ ಬಿಡುಗಡೆ ಮಾಡಿದನು. ಆಗ ಫ್ರಾಂಕೋ, "ಪ್ರಭೂ! ಎಲ್ಲಾ ಖೈದಿಗಳನ್ನೂ ಬಿಡುಗಡೆ ಮಾಡದಿದ್ದರೆ, ನನ್ನ ಬಿಡುಗಡೆಯಿಂದ ನನಗೇನೂ ಸಂತೋಷವಿಲ್ಲ" ಎಂದನು.

ರಾಜನು ಅದಕ್ಕೆ ಒಪ್ಪಲಿಲ್ಲ. ಹಾಗೆ ಮಾಡಿದರೆ ಜಿರಾಲ್ಡೋನಿಂದ ಬರುವ ಬಂಗಾರದ ಲಾಭ ನಿಂತು ಹೋಗುತ್ತದೆ! ಆದರೆ ಫ್ರಾಂಕೋ ಬಿಡಲಿಲ್ಲ. ದೊಡ್ಡ ಮನಸ್ಸು ಮಾಡಿ ಎಲ್ಲಾ ಖೈದಿಗಳನ್ನೂ ಬಿಡುಗಡೆ ಮಾಡಿಸಬೇಕೆಂದೂ ತುಂಬಾ ಬೇಡಿ ಕೊಂಡನು. ಕಡೆಗೆ ಸಾಯಲಿಕ್ಕೆ ಬಿದ್ದ ತನ್ನ ಪ್ರೀತಿಯ ಮಗಳು ಬಂಗಾರಕ್ಕಿಂತಲೂ ಹೆಚ್ಚಿನವ ಳೆಂಬ ಜ್ಞಾನ ಬಂತು ರಾಜನಿಗೆ. ಅವಳೂ ಫ್ರಾಂಕೋನ ಕೋರಿಕೆ ನೆರವೇರಿಸಬೇಕೆಂದು ತಂದೆ ಯೊಡನೆ ಹೇಳಿದಳು. ಮಗಳು ಚೆನ್ನಾಗಿದ್ದರೇ ಸಾಕೆಂದುಕೊಂಡು ರಾಜನು ಎಲ್ಲಾ ಖೈದಿಗಳನ್ನೂ ಬಿಡುಗಡೆ ಮಾಡಿದನು.

ಫ್ರಾಂಕೋ ಜಿರಾಲ್ಡೋ ಇಬ್ಬರೂ ತಮ್ಮ ಗ್ರಾಮಕ್ಕೆ ಹೊರಟರು. ಒಂದು ನದಿಯ ಹತ್ತಿರ ಬಂದ ಕೂಡಲೇ ಜಿರಾಲ್ಡೋ ತನ್ನ ಕಾಣಿಕೆಯ ಚೀಲವನ್ನು ತೆಗೆದು ನದಿಯೊಳಗೆ ಬೀಸಿ ಬಿಸುಟನು. ಫ್ರಾಂಕೋ ಆಶ್ಚರ್ಯದಿಂದ ನೋಡಿದನು.

"ಆ ಚೀಲ ನನಗೆ ಬೇಡವೇ ಬೇಡ. ಅದು ನನಗೆ ದುರದೃಷ್ಟವನ್ನೇ ಕೊಟ್ಟಿತು. ಸ್ವಲ್ಪವೂ ಸಂತೋಷ ಕೊಡಲಿಲ್ಲ. ದೇವತೆಗಳು ನಿನಗೆ ಕೊಟ್ಟ ಕಾಣಿಕೆಯೇ ಅತ್ಯಂತ ಶ್ರೇಷ್ಠವಾದುದು. ಮನುಷ್ಯನಿಗೆ ಧನಕ್ಕಿಂತಲೂ ಸಂತೋಷವೇ ಮುಖ್ಯ ವಾದುದು. ಸಂತೋಷವೇ ಸುಖ!" ಎಂದನು ಜಿರಾಲ್ಡೋ.





# ಕುಬೇರನ ಕೊಳ

**ಕಾ**ಶೀರಾಜ್ಯವನ್ನು ಬ್ರಹ್ಮದತ್ತ ರಾಜನು ಪಾಲಿಸಿ ಕೊಂಡಿದ್ದ ಕಾಲದಲ್ಲಿ, ಬೋಧಿಸತ್ವನು ಅವನಿಗೆ ಕುಮಾರನಾಗಿ ಜನ್ಮವೆತ್ತಿದನು. ಹಿರಿಯ ಕುಮಾರನಾದ ಅವನಿಗೆ ರಾಜನು ಮಹಾಶಾಸನನೆಂದು ನಾಮಕರಣ ಮಾಡಿದನು. ಮತ್ತೆರಡು ವರ್ಷಗಳ ಮೇಲೆ ರಾಣಿ ಇನ್ನೊಬ್ಬ ಮಗನಿಗೆ ಜನ್ಮವಿತ್ತಳು. ಎರಡನೇ ಮಗನಿಗೆ ಸೋಮದತ್ತನೆಂದು ಹೆಸರು.

ಹೀಗೆ ಇಬ್ಬರು ಮಕ್ಕಳು ಹುಟ್ಟಿದ ಮೇಲೆ ರಾಣಿಗೆ ಏನೋ ಒಂದು ಕಾಯಿಲೆ ಬಂದಿತು. ಮುಂದೆ ಎರಡು ವರ್ಷಗಳಲ್ಲೇ ರಾಣಿ ತೀರಿ ಹೋದಳು. ಆ ದುಃಖವು ಅಳಿಸಿ ಹೋದ ಮೇಲೆ ರಾಜನು ಇನ್ನೊಬ್ಬಳನ್ನು ಮದುವೆಯಾಗಿ ಅರಮನೆಯನ್ನು ಬೆಳಗಿಸಿಕೊಂಡನು. ಮತ್ತೊಂದು ವರ್ಷದಲ್ಲಿ ಎರಡನೇ ರಾಣಿ ಒಬ್ಬ ಮಗನನ್ನು ಹಡೆದಳು ಆಗ ರಾಜನು ತುಂಬಾ ಸಂತೋಷಪಟ್ಟು ಹೆಂಡತಿಯೊಂದಿಗೆ, "ಈ ಶುಭಸಮಯದಲ್ಲಿ ಏನಾದರೊಂದು ವರ ಕೇಳು. ಕೊಡುತ್ತೇನೆ" ಎಂದನು. "ಈಗ ಬೇಡ. ಬೇಕಾದಾಗ ಕೇಳುತ್ತೇನೆ" ಎಂದಳು ರಾಣಿ. ಇವಳ ಮಗನಿಗೆ ಆದಿತ್ಯನೆಂದು ಹೆಸರು. ಆದಿತ್ಯನು ಬೆಳೆಯುತ್ತ ಬಂದಂತೆ, ರಾಜೋಚಿತವಾದ ವಿದ್ಯೆಗಳನ್ನೆಲ್ಲ ಕಲಿಯುತ್ತ ಯೌವನಕ್ಕೆ ಬಂದನು.

ಒಂದುದಿನ ರಾಣಿ ರಾಜನೊಂದಿಗೆ, "ಪ್ರಭೂ ! ಹಿಂದೆ ನೀವು ನನಗೊಂದು ವರ ಕೊಡುವೆನೆಂದಿರಿ. ಬೇಕಾದಾಗ ಕೇಳುತ್ತೇನೆ ಎಂದೆನು. ಈಗ ಕೇಳುತ್ತೇನೆ. ಆದಿತ್ಯನಿಗೆ ಯುವರಾಜ ಪಟ್ಟಾಭಿಷೇಕ ಮಾಡಿಬಿಡಿ. ಅದೇ ನನಗೆ ಬೇಕಾದ ವರ" ಎಂದಳು.

ಆ ಮಾತನ್ನು ಕೇಳಿ ರಾಜನು ನಿಶ್ಚೇಷ್ಟಿತನಾದನು. "ಮೌನವಾದಿರೇಕೆ ?" ಎಂದು ಕೇಳಿದಳು ರಾಣಿ. "ನೀನು ಕೇಳಿದ್ದು ನ್ಯಾಯವಾದ ವರವಲ್ಲ. ಮೊದಲನೇ ರಾಣಿಯ ಕುಮಾರರು ಇಬ್ಬರಿರುವಾಗ, ಆದಿತ್ಯನಿಗೆ ಯುವರಾಜ ಪಟ್ಟವನ್ನು ಹೇಗೆ ಕಟ್ಟಲಿ ? ತಪ್ಪು" ಎಂದನು ರಾಜ.

ರಾಜನು ನಿರಾಕರಿಸಿದರೂ ರಾಣಿ ಸುಮ್ಮನಿರಲಿಲ್ಲ. ಸಂಧಿ ಸಿಕ್ಕಿದಾಗಲೆಲ್ಲಾ ತನ್ನ ಮಗನನ್ನು ಯುವರಾಜನನ್ನಾಗಿ ಮಾಡಬೇಕೆಂದು ಪೀಡಿಸತೊಡಗಿದಳು. ಅವಳು ತನ್ನ ಮಂಕುಪಟ್ಟು ಬಿಡುವವಳಲ್ಲವೆಂದು ರಾಜನಿಗೆ ಗೊತ್ತಾಯಿತು ಅಷ್ಟು ಮಾತ್ರವಲ್ಲದೆ ಹಿರಿಯ ಕುಮಾರರಿಗೆ



ನಾನೂ ಬರುತ್ತೇನೆ. ಒತ್ತಾಯ ಮಾಡಿ ತಂದೆಯಿಂದ ಅನುಮತಿ ಪಡೆದಿದ್ದೇನೆ" ಎಂದನು ಆದಿತ್ಯ.

ಮೂವರೂ ಸ್ವಲ್ಪ ದೂರ ನಡೆದು ಪ್ರಯಾಣದ ಬಳಲಿಕೆಯನ್ನು ತೀರಿಸಲು ಒಂದು ಮರದ ನೆರಳಿನಲ್ಲಿ ಕುಳಿತರು. ಮಹಾಶಾಸನನು ಚಿಕ್ಕತಮ್ಮನಾದ ಆದಿತ್ಯನೊಂದಿಗೆ, "ತಮ್ಮಾ, ಅಕೋ ಅಲ್ಲಿ ಮರಗಳ ಹತ್ತಿರ ಒಂದು ಕೊಳವು ಕಾಣುತ್ತದೆ. ಅಲ್ಲಿಗೆ ಹೋಗಿ ನಿನ್ನ ಬಾಯಾರಿಕೆಯನ್ನು ತೀರಿಸಿ, ನಮಗೂ ತಾಮರೆ ಎಲೆಯ ದೊನ್ನೆಯಲ್ಲಿ ನೀರು ತೆಗೆದು ಕೊಂಡು ಬಾ" ಎಂದನು.

ಆದಿತ್ಯನು ಅಲ್ಲಿಗೆ ಹೋಗಿ ಕೊಳದ ನೀರಿಗೆ ಇಳಿದದ್ದೇ ತಡ, ಕಾದುಕೊಂಡಿದ್ದ ಜಲ ಪಿಶಾಚಿಯೊಂದು ಅವನನ್ನು ಹಿಡಿದು ನೀರಿನ ಅಡಿಯಲ್ಲಿರುವ ತನ್ನ ಮನೆಗೆ ಒಯ್ದುಬಿಟ್ಟಿತು. ಎಷ್ಟು ಹೊತ್ತಾದರೂ ಆದಿತ್ಯನು ಬಾರದಿರುವುದನ್ನು ನೋಡಿ, ಮಹಾಶಾಸನನು ಸೋಮದತ್ತನನ್ನು ಕಳುಹಿಸಿದನು. ಅವನೂ ಹಿಂದಿರುಗಲಿಲ್ಲ.

ತಮ್ಮಂದಿರಿಗೆ ಏನೋ ಅಪಾಯವಾಗಿರಬೇಕೆಂದುಕೊಂಡು, ಮಹಾಶಾಸನನು ಕೈಯಲ್ಲಿ ಕತ್ತಿ ಹಿಡಿದುಕೊಂಡು ಆ ಕೊಳದ ಬಳಿಗೆ ಹೋದನು. ಅವನು ಕೊಳದ ನೀರಿಗೆ ಇಳಿಯ್ಯದೆ, ಕೊಳವನ್ನೂ, ಪರಿಸರಗಳನ್ನೂ ಪರೀಕ್ಷಿಸಿ ನೋಡುವುದನ್ನು ಗಮನಿಸಿಕೊಂಡಿದ್ದ ಜಲಪಿಶಾಚಿ, ಇವನು ಈ ಮೊದಲಿನವರಂತೆ ದುಡುಕುಗಾರನಲ್ಲವೆಂದು ತಿಳಿದು, ಒಬ್ಬ ಬೇಡನ ರೂಪದಲ್ಲಿ ಅವನ ಹತ್ತಿರ ಬಂದು, "ಹೀಗೆ ನೋಡುತ್ತಾ, ನಿಂತೆಯೇಕೆ? ದಾಹವಾಗಿದ್ದರೆ ಕೊಳಕ್ಕಿಳಿದು ನೀರು ಕುಡಿಯಬಹುದಲ್ಲಾ? ಏನು ಯೋಚಿಸುವೆ?" ಎಂದು ಕೇಳಿತು.

ಮಹಾಶಾಸನನು ಅವನನ್ನು ತೀಕ್ಷ್ಣದೃಷ್ಟಿಯಿಂದ ನೋಡುತ್ತಾ, "ನಿನ್ನ ರೀತಿ ನೋಡಿದರೆ ನನ್ನ ತಮ್ಮಂದಿರಿಬ್ಬರಿಗೆ ನೀನೇ ಏನೋ ಮಾಡಿದ

ಅವಳಿಂದ ಏನಾದರೂ ಕೆಡುಕು ಬರುವುದೆಂಬ ಭಯವೂ ಉಂಟಾಯಿತು ರಾಜನಿಗೆ.

ಒಂದುದಿನ ರಾಜನು ಹಿರಿಯ ಕುಮಾರರಿಬ್ಬರನ್ನೂ ಕರೆದು, ನಡೆದ ಸಂಗತಿ ಸಂದರ್ಭಗಳನ್ನು ಅವರೊಂದಿಗೆ ಹೇಳಿ, "ನೀವಿಬ್ಬರೂ ರಾಜ್ಯ ಬೇಡವೆಂದು ಹೇಳುವ ವಿಷಯ ಮುಖ್ಯವಲ್ಲ. ನನ್ನ ಅನಂತರ ನೀವೇ ರಾಜರಾಗಿರಬೇಕೆಂದು ನಾನೂ ಪ್ರಜೆಗಳೂ ಸಹ ಬಯಸುತ್ತೇವೆ. ಅದೇ ನ್ಯಾಯ ಕೂಡಾ. ಆದ್ದರಿಂದ ಪ್ರಸ್ತುತ ನೀವಿಬ್ಬರೂ ಎಲ್ಲಿಗಾದರೂ ಹೋಗಿಬಿಡಿ. ಇಲ್ಲಿಯ ಪರಿಸ್ಥಿತಿ ಹದಕ್ಕೆ ಬಂದಾಗ ಬನ್ನಿರಿ." ಎಂದನು.

ಹಾಗೆಯೇ ಆಗಲೆಂದು ಮಹಾಶಾಸನನೂ, ಸೋಮದತ್ತನೂ ಪ್ರಯಾಣ ಹೊರಟರು. ಅವರು ನಗರದ ಮೇರೆಯನ್ನು ಸೇರುವಷ್ಟರಲ್ಲಿ, ಚಿಕ್ಕತಮ್ಮನಾದ ಆದಿತ್ಯನು ಕೂಡಾ ಓಡಿಬರುವುದನ್ನು ನೋಡಿ ನಿಂತರು. "ಅಣ್ಣಗಳಿರಾ! ನಿಮ್ಮೊಂದಿಗೆ

ಹಾಗಿದೆ. ನನ್ನ ಅನುಮಾನ ಸರಿತಾನೇ ? ಮರೆ ಮಾಚದೆ ನಿಜ ಸಂಗತಿಯನ್ನು ಹೇಳು " ಎಂದನು.

"ನೀನು ಸ್ವಲ್ಪ ವಿವೇಕವಂತನ ಹಾಗೆ ಕಾಣುವೆ. ನಿಜ ಹೇಳುತ್ತೇನೆ ಕೇಳು. ಈ ಕೊಳಕ್ಕೆ ಬರುವ ಜ್ಞಾನಿಗಳನ್ನು ಮಾತ್ರ ಬಿಟ್ಟು, ಉಳಿದವರನ್ನೆಲ್ಲಾ ಹಿಡಿದು ಬಂಧಿಸುವುದೇ ನನ್ನ ಕೆಲಸ. ಇದು ಕುಬೇರನ ಆಜ್ಞೆ. ಕುಬೇರನ ಕೊಳವಿದು " ಎಂದಿತು ಬೇಡ ರೂಪದ ಜಲ ಪಿಶಾಚಿ.

"ಹಾಗಾದರೆ ನೀನು ಜ್ಞಾನಿಗಳಿಂದ ತಕ್ಕ ಉಪದೇಶ ಪಡೆಯಬೇಕೆಂಬುದು ಕುಬೇರನ ಉದ್ದೇಶ. ನಾನು ನಿನಗೆ ಜ್ಞಾನಬೋಧೆ ಮಾಡುತ್ತೇನೆ. ಆದರೆ ಈಗ ತುಂಬಾ ಮಾರ್ಗಾಯಾಸ ದಲ್ಲಿದ್ದೇನೆ." ಎಂದನು ಮಹಾಶಾಸನ.

ಕೂಡಲೇ ಜಲಪಿಶಾಚಿ ನಿಜರೂಪದಿಂದ ಅವನನ್ನು, ನೀರಿನ ಅಡಿಯಲ್ಲಿರುವ ತನ್ನ ಮನೆಗೆ ಕರೆದುಕೊಂಡು ಹೋಗಿ ಉಚಿತಾಸನವಿತ್ತು ಗೌರವದಿಂದ ಅತಿಥಿ ಮರ್ಯಾದೆ ಮಾಡಿತು. ಆಮೇಲೆ ಅದು ಉಪದೇಶ ಕೇಳಲು ಅವನ ಪಾದಗಳ ಹತ್ತಿರ ವಿನಯದಿಂದ ಕುಳಿತಿತು.

ಮಹಾಶಾಸನನು ತಾನು ಗುರುವಿನ ಹತ್ತಿರ ಕಲಿತುದನ್ನೂ, ಕೇಳಿದುದನ್ನೂ, ಸ್ವಾನುಭವದಿಂದ ತಿಳಿದುದನ್ನೂ ಜಲಪಿಶಾಚಿಗೆ ಅರ್ಥವಾಗುವಂತೆ ಹೇಳಿದನು. ಅದನ್ನೆಲ್ಲ ಕೇಳಿ ಸಂತುಷ್ಟವಾದ ಪಿಶಾಚಿ, "ಮಹಾತ್ಮಾ ! ನೀನು ಮಹಾ ಜ್ಞಾನಿಯೇ ನಿಜ. ನಿನ್ನ ತಮ್ಮಂದಿರಲ್ಲಿ ಒಬ್ಬನನ್ನು ಮಾತ್ರವೇ ಬಿಡುಗಡೆ ಮಾಡಿಕೊಡುತ್ತೇನೆ. ಇಬ್ಬರಲ್ಲಿ ಯಾರು ಬೇಕೆಂಬುದನ್ನು ಹೇಳು " ಎಂದಿತು.

"ಹಾಗಾದರೆ ಚಿಕ್ಕವನಾದ ಆದಿತ್ಯನನ್ನು ಬಿಟ್ಟು ಬಿಡು " ಎಂದನು ಮಹಾಶಾಸನ.

"ದೊಡ್ಡವನನ್ನು ಬಿಟ್ಟು ಚಿಕ್ಕವನ್ನು ಕೇಳುವುದು ಧರ್ಮವೆನಿಸುತ್ತದೆಯೆ ? " ಎಂದು ಜಲಪಿಶಾಚಿ ಪುನಃ ಕೇಳಿತು.

"ಇದರಲ್ಲಿ ಧರ್ಮವಲ್ಲದುದೇನೂ ಇಲ್ಲ. ನನ್ನ ತಾಯಿಗೆ ನಾನೊಬ್ಬ ಉಳಿದಿರುವಾಗ, ನನ್ನ



ಚಿಕ್ಕಮ್ಮನಿಗೂ ಒಬ್ಬ ಮಗನಿರಬೇಡವೇ? ನನ್ನ ಚಿಕ್ಕಮ್ಮ ತನ್ನ ಮಗ ಆದಿತ್ಯನಿಗಾಗಿಯೇ ನನ್ನ ತಂದೆಯ ಹತ್ತಿರ ವಾದಾಡಿ ನಿಷ್ಫಲವಾಗಿ ಹೋದಳು. ತಂದೆಯ ಆಜ್ಞೆಯಿಂದಲೇ ನಾವು ಮೂವರೂ ಹೀಗೆ ಹೊರಟಿದ್ದೇವೆ. ಸೋದರ ಪ್ರೇಮದಿಂದ ಬಾಲಬುದ್ಧಿಯ ಆದಿತ್ಯನೂ ನಮ್ಮೊಂದಿಗೆ ಬಂದನು. ದೊಡ್ಡವರಾದ ನಾವು ಮತ್ತೆ ಮನೆಗೆ ಹೋದರೆ, ಆದಿತ್ಯನೆಲ್ಲಿ ಎಂದು ಎಲ್ಲರೂ ಕೇಳುವರು. ಅವನನ್ನು ಜಲಪಿಶಾಚಿ ನುಂಗಿಬಿಟ್ಟಿತೆಂದರೆ ನ್ಯಾಯವಾದೀತೆ?" ಎಂದು ಮಹಾಶಾಸನನು ಜಲಪಿಶಾಚಿಗೆ ಇದಿರು ಪ್ರಶ್ನೆ ಹಾಕಿದನು.

ಆಗ ಜಲಪಿಶಾಚಿ, ಮಹಾಶಾಸನನ ಕಾಲಿಗೆ ಸಾಷ್ಟಾಂಗ ನಮಸ್ಕಾರಮಾಡಿ, ಎದ್ದು ವಿನಯದಿಂದ ಕೈಮುಗಿದು "ಮಹಾತ್ಮಾ, ನೀನು ಬರಿಯ ಜ್ಞಾನಿ ಮಾತ್ರವೇ ಅಲ್ಲ. ನಿನ್ನ ಹೃದಯವೂ ದೊಡ್ಡದು. ಸಾಗರದಷ್ಟು ವಿಶಾಲವಾದುದು. ನಿನ್ನಂತಹ ಮಹಾಜ್ಞಾನ ಸಾಗರನನ್ನು ನಾನು ಇದುವರೆಗೂ ನೋಡಲಿಲ್ಲ. ನಿನ್ನ ಇಬ್ಬರು ತಮ್ಮಂದಿರಿಗೂ ಸ್ವೇಚ್ಛೆಯನ್ನು ಕೊಡುತ್ತೇನೆ. ನಾನು ಕುಬೇರನ ಮಿತ್ರ. ನಾನು ಗರ್ವಾಂಧನಾಗಿ ಅಜ್ಞಾನದಿಂದ ವರ್ತಿಸಿದ್ದಕ್ಕಾಗಿ ನನಗೆ ಹೀಗೆ ಜ್ಞಾನೋಪದೇಶ ಪಡೆಯಬೇಕೆಂದು ಶಾಪಕೊಟ್ಟು ನಿಯಮಿಸಿದ್ದಾನೆ, ನೀವು ಈ ಅರಣ್ಯದಲ್ಲಿರುವಷ್ಟುದಿನಗಳವರೆಗೆ ನನ್ನ ಅತಿಥಿಗಳಾಗಿರಬೇಕು" ಎಂದು ಹೇಳಿ, ಇಬ್ಬರು ತಮ್ಮಂದಿರನ್ನೂ ಕರೆದು ತಂದು ನಿಲ್ಲಿಸಿ, "ಇಂತಹ ಅಣ್ಣನನ್ನು ಪಡೆದು ನೀವಿಬ್ಬರೂ ಧನ್ಯರಾದಿರಿ" ಎಂದಿತು.

ಮಹಾಶಾಸನನೂ, ಅವನ ತಮ್ಮಂದಿರೂ ಕುಬೇರನ ಮಿತ್ರನಾದ ಜಲಪಿಶಾಚಿಯ ಅತಿಥಿಗಳಾಗಿ ಕೆಲವು ದಿನಗಳ ವರೆಗೆ ಅಲ್ಲಿಯೇ ಕಾಲ ಕಳೆಯಲು, ಜಲಪಿಶಾಚಿಯ ಶಾಪ ಹೋಗಿ, ಅವನು ದೇವಪುರುಷನಾದನು.

ಆಮೇಲೆ ಮಹಾಶಾಸನನು ತಮ್ಮಂದಿರೊಂದಿಗೆ ತಂದೆಯ ಬಳಿಗೆ ಹೋದನು. ತಾಯಿಯ ಅಭಿಪ್ರಾಯಕ್ಕೆ ಆದಿತ್ಯನೇ ಒಪ್ಪದೆ ಹೋದುದರಿಂದ ಅವಳೂ ಆ ಸುದ್ದಿ ಮತ್ತೆ ಹೇಳಲಿಲ್ಲ. ಅವಳ ಸಂತೋಷದ ಅನುಮತಿಯಿಂದ, ಬ್ರಹ್ಮದತ್ತ ರಾಜನು ಮಹಾಶಾಸನನಿಗೆ ಯುವರಾಜ ಪಟ್ಟಾಭಿಷೇಕವನ್ನು ನೆರವೇರಿಸಿದನು. ಮಹಾಶಾಸನನು ರಾಜನಾಗಿ, ಸೋಮದತ್ತನನ್ನು ತನ್ನ ಪ್ರತಿನಿಧಿಯಾಗಿಯೂ, ಆದಿತ್ಯನನ್ನು ಸೇನಾಪತಿಯಾಗಿಯೂ ಮಾಡಿದನು. ಜಲಪಿಶಾಚಿಯ ಸ್ಮಾರಕವು ಉಳಿಯುವಂತೆ ಒಂದು ಸುಂದರವಾದ ದೇವಾಲಯವನ್ನೂ ನಿರ್ಮಿಸಿದನು.





# ಹರ್ಷವರ್ಧನ

ಸಾವಿರದನಾನ್ನೂರು ವರ್ಷಗಳ ಹಿಂದೆ ಪ್ರಭಾಕರವರ್ಧನನೆಂಬ ರಾಜನು ಚಿಕ್ಕದಾದರೂ, ಸುಸಂಪನ್ನವಾದ ಸ್ಥಾನೇಶ್ವರ ರಾಜ್ಯವನ್ನು ಪಾಲಿಸಿಕೊಂಡಿದ್ದನು. ಅವನಿಗೆ ರಾಜ್ಯವರ್ಧನ, ಹರ್ಷವರ್ಧನ ಎಂಬ ಇಬ್ಬರು ಕುಮಾರರೂ, ರಾಜಶ್ರೀ ಎಂಬ ಮಗಳೂ ಇದ್ದರು. ಕನ್ಯಾಕುಬ್ಜದ ರಾಜನಾದ ಗ್ರಹವರ್ಮನೊಂದಿಗೆ ರಾಜಶ್ರೀಯ ವಿವಾಹ ನಡೆಯಿತು.

ಗ್ರಹವರ್ಮನು ತನ್ನ ನವವಧುವಿನೊಂದಿಗೆ ಕನ್ಯಾಕುಬ್ಜಕ್ಕೆ ಹಿಂದಿರುಗಿ ಬಂದ ಕೆಲವೇ ದಿನಗಳಲ್ಲಿ ಮಾಲ್ವಾದ ರಾಜನು ಕನ್ಯಾಕುಬ್ಜವನ್ನು ಮುತ್ತಿದನು. ಆಗ ನಡೆದ ಯುದ್ಧದಲ್ಲಿ ಗ್ರಹವರ್ಮನು ವೀರಮರಣ ಪಡೆದನು.





ವಿಜಯಿಯಾದ ಮಲ್ವಾದರಾಜ, ರಾಜಶ್ರೀಯನ್ನು ಬಂದಿನಿಯಾಗಿ ಹಿಡಿದು ತನ್ನ ನಗರಕ್ಕೆ ತೆಗೆದುಕೊಂಡು ಹೋದನು. ಈ ದುಃಖ ವಾರ್ತೆಯನ್ನು ಕೇಳಿ ಪ್ರಭಾಕರವರ್ಧನ ರಾಜನೂ, ಕುಮಾರರೂ ಅತ್ಯಂತ ವಿಷಾದವನ್ನನುಭವಿಸಿದರು.

ಹಿರಿಯನೂ ಸ್ಥಾನೇಶ್ವರದ ಯುವರಾಜನೂ ಆದ ರಾಜ್ಯ ವರ್ಧನನು ಸೈನ್ಯದೊಂದಿಗೆ ಮಾಲ್ವಾ ರಾಜ್ಯದ ಮೇಲೆ ದಾಳಿಮಾಡಿ, ಯುದ್ಧದಲ್ಲಿ ಶತ್ರು ರಾಜನನ್ನು ಸೋಲಿಸಿದನು. ರಾಜಶ್ರೀ ಯನ್ನು ಬಂಧನದಿಂದ ಬಿಡಿಸಿದನು. ಅಣ್ಣ ತಂಗಿಯರು ಒಬ್ಬರನ್ನೊಬ್ಬರು ನೋಡಿ ಕಣ್ಣೀರು ಸುರಿಸಿಕೊಂಡರು. ರಾಜ್ಯವರ್ಧನನು ತಂಗಿಯನ್ನು ಕರೆದುಕೊಂಡು ಸ್ಥಾನೇಶ್ವರಕ್ಕೆ ಹಿಂದಿರುಗಿದನು.





ಗೋಂಡವನ ಪ್ರಾಂತವನ್ನು ಪಾಲಿಸುವ ಶಶಾಂಕ ರಾಜನಿಗೆ ಕನ್ಯಾಕುಬ್ಜವನ್ನು ಮಾತ್ರವಲ್ಲದೆ ಮಾಲ್ವಾ ರಾಜ್ಯವನ್ನು ಕೂಡಾ ಜಯಿಸಬೇಕೆಂಬ ಆಶೆಯಿತ್ತು. ಅವನು ಕಳ್ಳತನವಾಗಿ ಸೈನ್ಯ ದೊಂದಿಗೆ ಬಂದು, ದಾರಿಯಲ್ಲೇ ರಾಜ್ಯವರ್ಧನನ ಗುಂಪಿನಮೇಲೆ ಬಿದ್ದನು. ಆ ಯುದ್ಧದಲ್ಲಿ ರಾಜ್ಯ ವರ್ಧನನು ಸತ್ತುಬೀಳಲು, ರಾಜಶ್ರೀ ತಪ್ಪಿಸಿ ಕೊಂಡು ಓಡಿಹೋದಳು.

ಈ ದುಸ್ಸಂಘಟನೆಗಳ ನಡುವೆ ರಾಜನಾದ ಪ್ರಭಾಕರ ವರ್ಧನನು ತೀರಿಹೋದನು. ಮಂತ್ರಿ ಗಳೂ ಸಾಮಂತರೂ ದುಃಖದಿಂದ ವೈರಾಗ್ಯ ತಾಳಿದ ಹರ್ಷವರ್ಧನನಿಗೆ ಒತ್ತಾಯಪಡಿಸಿ ರಾಜ್ಯಾಭಿಷೇಕ ಮಾಡಿದರು. ಹದಿನಾರನೆಯ ವಯಸ್ಸಿನಲ್ಲಿ ಹರ್ಷವರ್ಧನನು ಸ್ಥಾನೇಶ್ವರದ ರಾಜನಾದನು.







ಹರ್ಷವರ್ಧನನು ರಾಜನಾದ ಕೂಡಲೇ ತನ್ನ ಸಹೋದರಿ ರಾಜಶ್ರಿಯ ಅನ್ವೇಷಣೆಗೆ ಪ್ರಾರಂಭಿಸಿದನು. ಅವನು ಒಂದಾನೊಂದು ಅರಣ್ಯದಲ್ಲಿ ಪ್ರವೇಶಿಸಿ, ಅಲ್ಲಿ ಕ್ರೂರ ಮೃಗಗಳೆಲ್ಲಾ ಸಾಧುಭಾವದೊಂದಿಗಿರುವ ಅತಿಶಯವನ್ನು ನೋಡಿ ಅತ್ಯಾಶ್ಚರ್ಯಪಟ್ಟನು.

ಅಲ್ಲೆಲ್ಲೋ ಇರುವ ಯಾವ ಮಹಾ ಪುರುಷನೋ ಇದಕ್ಕೆ ಕಾರಣವಿರಬೇಕೆಂದು ಅವನಿಗೆ ಅನುಮಾನವಾಯಿತು. ಅವನು ಮತ್ತಿಷ್ಟು ಮುಂದೆ ಹೋಗಲು, ಕೆಲವುಂದಿ ಸನ್ಯಾಸಿಗಳು ಬಂದು, ಹರ್ಷವರ್ಧನನನ್ನು ತಮ್ಮ ಗುರುವಿನ ಬಳಿಗೆ ಕರೆದೊಯ್ದರು. ಆ ಸಮಯದಲ್ಲಿ ಒಬ್ಬ ಸನ್ಯಾಸಿ ಅಲ್ಲಿಗೆ ಬಂದು, ಅರಣ್ಯದ ಇನ್ನೊಂದು ಕಡೆಯಲ್ಲಿ ಒಬ್ಬಳು ಸ್ತ್ರೀ ಅಗ್ನಿಪ್ರವೇಶಕ್ಕೆ ತಯಾರಾಗುವ ಸಮಾಚಾರ ಹೇಳಿದನು.






ಹರ್ಷವರ್ಧನನೂ ಗುರುವೂ ಬೇಗಬೇಗನೇ ಆ ಸ್ಥಳಕ್ಕೆ ಓಡಿದರು ಆ ಸ್ತ್ರೀ ಬೇರೆ ಯಾರೂ ಅಲ್ಲ, ಹರ್ಷವರ್ಧನನ ಸೋದರಿ ರಾಜಶ್ರೀಯೇ! ಅವಳು ಆತ್ಮತ್ಯಾಗ ಮಾಡಲು ಒಣಕಟ್ಟಿಗೆಗಳನ್ನು ಸೇರಿಸಿ ಬೆಂಕಿಹಚ್ಚಿದ್ದಳು. ಬೆಂಕಿ ಜೋರಾಗುವಾಗ ಹಾರಲು ಸಿದ್ಧಳಾಗಿದ್ದಳು. ಅಷ್ಟರಲ್ಲಿ ಗುರುವೂ ಹರ್ಷವರ್ಧನನೂ ಅವಳನ್ನು ಅಗ್ನಿಪ್ರವೇಶದಿಂದ ತಡೆದುಬಿಟ್ಟರು.

ಹರ್ಷವರ್ಧನನು ತನ್ನ ಸಹೋದರಿಯನ್ನು ಸ್ಥಾನೇಶ್ವರಕ್ಕೆ ಕರೆದುಕೊಂಡು ಬಂಧು, ತನಗೆ ಸಂರಕ್ಷಳಾಗಿರಬೇಕೆಂದು ಕೇಳಿಕೊಂಡು ಅವಳ ಒಪ್ಪಿಗೆ ಪಡೆದನು. ಮುಂದೆ ಒಂದು ದಿನ ರಾಜ್ಯ ಪಾಲನೆಯ ಬಾಧ್ಯತೆಗಳನ್ನು ತಕ್ಕವರಿಗೆ ಬಿಟ್ಟು ಕೊಟ್ಟು ಇಬ್ಬರೂ ವನವಾಸದಲ್ಲಿ ಧ್ಯಾನ ಮಾಡುತ್ತ ಕಾಲಕಳೆಯುವುದೆಂದು ನಿರ್ಧರಿಸಿ ಕೊಂಡರು.





ಆಮೇಲೆ ಕೆಲವು ದಿನಗಳಲ್ಲಿ ಹರ್ಷವರ್ಧನನು ತನ್ನ ಅಣ್ಣನನ್ನು ಕೊಂದ ರಾಜ ಶಶಾಂಕನನ್ನು ಯುದ್ಧದಲ್ಲಿ ಸೋಲಿಸಿದನು. ಅದು ಮಾತ್ರ ವಲ್ಲದೆ ಮತ್ತೆಷ್ಟೋ ರಾಜರನ್ನು ಜಯಿಸಿ, ಒಂದು ಸಾಮ್ರಾಜ್ಯಕ್ಕೇ ಚಕ್ರವರ್ತಿಯಾದನು. ರಾಜ್ಯ ದೊಳಗಿನ ಎಲ್ಲಾ ಮತಗಳ ಮೇಲೆಯೂ ಸರಿಸಮಾನವಾದ ಆದರವನ್ನು ತೋರಿಸಿದನು ಹರ್ಷವರ್ಧನ.

ಅವನು ತನ್ನ ಸಂಪತ್ರನ್ನು ಆಗಾಗ ಪಂಡಿತರಿಗೂ ಬಡವರಿಗೂ ಹಂಚುತ್ತಿದ್ದನು. ಅಂತಹ ಸಂದರ್ಭ ದಲ್ಲಿ ಒಂದು ಸಾರಿ ತನಗಿರುವುದನ್ನೆಲ್ಲಾ ಪ್ರಜೆ ಗಳಿಗೆ ದಾನಮಾಡಿ, ತನ್ನ ಸಹೋದರಿಯಾದ ರಾಜಶ್ರೀಯಿಂದ, ತಾನು ಉಟ್ಟುಕೊಳ್ಳುವ ಬಟ್ಟೆಗಳನ್ನು ಭಿಕ್ಷೆಯಾಗಿ ಸ್ವೀಕರಿಸಿದನು.





# ಸೂಜಿಯಿಂದ ಸೌಭಾಗ್ಯ

**ಹಿಂ**ದೆ ಒಂದು ಕಾಲದಲ್ಲಿ ಕೋಸಲ ದೇಶದ ಒಂದು ಊರಿನಲ್ಲಿ ಮೂವರು ಯುವಕರು ಪರಸ್ಪರ ಮಿತ್ರರಾಗಿದ್ದರು. ಅವರಲ್ಲಿ ನಂದ ಮತ್ತು ಸುನಂದ ಎಂಬವರಿಬ್ಬರು ಪಿತ್ರಾರ್ಜಿತದ ಬಲದಿಂದ ಧನಿಕರಾದರು. ಮೂರನೆಯವನಾದ ಆನಂದನೆಂಬವನು ತೀರ ಬಡವನು. ಪಿತ್ರಾರ್ಜಿತವೇನೂ ಇಲ್ಲದವನು. ಅವನು ಹಗ್ಗ ಹೊಸೆಯುವ ವೃತ್ತಿ ಮಾಡಿಕೊಂಡು ಬದುಕುತ್ತಿದ್ದನು. ಅವನನ್ನು ಯಾವ ವಿಧವಾಗಿಯಾದರೂ ತಮ್ಮ ಹಾಗೆ ಧನಿಕನಾಗುವಂತೆ ಮಾಡಬೇಕೆಂದು ನಂದ ಸುನಂದರು ತಮ್ಮೊಳಗೆ ಆಲೋಚನೆ ಮಾಡುತ್ತಿದ್ದರು.

"ಮೊದಲು ಬಂಡವಲು ಹಾಕಲಿಕ್ಕೆ ಸ್ವಲ್ಪ ಹಣವಿದ್ದುಬಿಟ್ಟರೆ ಯಾವನಾದರೂ ಧನಿಕನಾಗಿಬಿಡುತ್ತಾನೆ. ಆನಂದನಿಗೆ ಅಂತಹ ಬಂಡವಲು ಹಾಕಲು ದಾರಿಯಿಲ್ಲ ಪಾಪ! ನಾವೇ ಅವನಿಗೆ ಸ್ವಲ್ಪ ಮೂಲಧನ ಕೊಟ್ಟುಬಿಡೋಣ" ಎಂದು ನಂದನು ಸುನಂದನೊಂದಿಗೆ ಹೇಳಿದನು.

"ಹಾಗೆ ಹೇಳಲಾಗದು. ಎಷ್ಟೋ ಮಂದಿ ಧನಿಕರು ಕೂಡಾ ದರಿದ್ರರಾಗಿ ಹೋಗಿದ್ದಾರೆ. ಯೋಗ ಕೂಡಿ ಬಂದರೆ ಬಂಡವಲು ಇಲ್ಲದೆಯೇ ಧನಿಕರಾಗಲೂಬಹುದು" ಎಂದನು ಸುನಂದ.

ನಂದನು ಅದಕ್ಕೆ ಒಪ್ಪದೆ, ತನ್ನ ಮಾತನ್ನು ನಿಜವೆಂದು ತೋರಿಸಲಿಕ್ಕಾಗಿ ಆನಂದನಿಗೆ ಮರುದಿನವೇ ಇನ್ನೂರು ವರಹಗಳನ್ನು ಕೊಟ್ಟು ಅವುಗಳಿಂದ ಏನಾದರೊಂದು ವ್ಯಾಪಾರ ಶುರು ಮಾಡುವಂತೆ ಹೇಳಿದನು. ಆನಂದನು ಸಂತೋಷಪಟ್ಟು, ಆ ವರಹಗಳನ್ನು ತನ್ನ ತಲೆಗೆ ಕಟ್ಟಿಕೊಳ್ಳುವ ಬಟ್ಟೆಯ ಮೂಲೆಯಲ್ಲಿ ಕಟ್ಟಿಟ್ಟುಕೊಂಡನು. ಆ ಮೇಲೆ ಅವನು ಮನೆಗೆ ಹಿಂದಿರುಗುವಾಗ, ಅವನ ಮುಂಡಾಸಿನಲ್ಲಿದ್ದ ಹಣದ ಗಂಟು ಯಾವುದೋ ಪಕ್ಷಿಗೆ ಕೋಳಿಮರಿಯಂತೆ ಕಂಡಿರಬೇಕು. ಅದು ಅವನ ತಲೆಯ ಮುಂಡಾಸನ್ನೇ ಹಾರಿಸಿ ಕೊಂಡು ಹೋಯಿತು. ಜೇಬಿನಲ್ಲಿ ಖರ್ಚಿಗಾಗಿ ಇಟ್ಟುಕೊಂಡಿದ್ದ ಐದು ವರಹಗಳಷ್ಟೇ ಉಳಿದಿದ್ದುವು. ಉಳಿದ ವರಹಗಳೆಲ್ಲಾ ರೆಕ್ಕೆ ಬಂದು ಹಾರಿಹೋದುದನ್ನು ನೋಡಿ ಅವನು ತುಂಬಾ ನೊಂದುಕೊಂಡನು.

ಕಡೆಗೆ ಕೆಲವು ದಿನಗಳ ಮೇಲೆ ನಂದ ಸುನಂದರು ಆನಂದನ ಮನೆಗೆ ಬಂದು, ಅವನ ಪರಿಸ್ಥಿತಿಯಲ್ಲಿ

ಯಾವ ಬದಲಾವಣೆಯೂ ಇಲ್ಲದಿರುವುದನ್ನು ನೋಡಿ ಕಾರಣ ಕೇಳಿದರು. ಅವನೂ ನಡೆದ ಸಂಗತಿ ಹೇಳಿದನು.

ಅವನು ಹೇಳಿದ ಸಮಾಚಾರವನ್ನು ನಂದನೇನೋ ನಂಬಿದನು. ಆದರೆ ಸುನಂದನು ನಂಬಲಿಲ್ಲ. ಆನಂದನು ಆ ಹಣವನ್ನು ದುರ್ವಿನಿಯೋಗ ಮಾಡಿ ಕಲ್ಪಿತ ಕಥೆ ಹೇಳುವನೆಂದುಕೊಂಡನು. ನಂದನು ನಂಬುಗೆ ಬಿಡದೆ, ಇನ್ನೊಂದು ಇನ್ನೂರು ವರಹ ಗಳನ್ನು ಅವನಿಗೆ ಕೊಟ್ಟು, "ಈಸಾರಿಯಾದರೂ ಜಾಗರೂಕತೆಯಿಂದ ಏನಾದರೂ ವ್ಯಾಪಾರ ಮಾಡಿ ಅಭಿವೃದ್ಧಿಗೆ ಬಾ" ಎಂದನು.

ಆನಂದನು ಅಗತ್ಯಕ್ಕೆ ಬೇಕಾಗಿ ಕೆಲವು ವರಹ ಗಳನ್ನು ಜೇಬಿನಲ್ಲಿಟ್ಟುಕೊಂಡು ಉಳಿದುವನ್ನು ತೌಡಿನ ಬಾನೆಯ ಅಡಿಯಲ್ಲಿ ಭದ್ರವಾಗಿರಿಸಿ ಮನೆಗೆ ಬೇಕಾದ ಸಾಮಾನು ತರೋಣವೆಂದು ಅಂಗಡಿ ಬೀದಿಗೆ ಹೋದನು. ಅವನು ಹಿಂದಿರುಗಿ ಬರುವಾಗ ತೌಡಿನ ಬಾನೆ ಅಂಗಳದಲ್ಲಿ ಖಾಲಿ ಯಾಗಿರುವುದು ಕಂಡಿತು. ಇದೇನೆಂದು ಹೆಂಡತಿ ಯನ್ನು ಕೇಳಿದನು. "ಮತ್ತೇನಿಲ್ಲ. ಉಪ್ಪು ಮಾರಿಕೊಂಡು ಬಂದ. ಹಣವಿರಲಿಲ್ಲ. ಆದ್ದರಿಂದ ತೌಡು ಮಾರಿ ಎರಡು ಸೇರು ಉಪ್ಪು ತಕ್ಕೊಂಡೆ" ಎಂದಳು ಹೆಂಡತಿ.

ಆನಂದನಿಗೆ ಗಂಟಲಲ್ಲಿ ದುಃಖವು ಬಂತು. ಅದರೊಳಗೆ ವರಹಗಳಿದ್ದ ಸಂಗತಿ ಅವಳಿಗೆ ಗೊತ್ತಾಗ ಲಿಲ್ಲ. ತನಗೆ ಧನವನ್ನು ದಕ್ಕಿಸಿಕೊಳ್ಳುವ ಭಾಗ್ಯ ಇಲ್ಲವೆಂದೇ ಅವನಿಗೆ ಸ್ಪಷ್ಟವಾಯಿತು.

ಮತ್ತೆ ಕೆಲವು ದಿನಗಳ ಮೇಲೆ ನಂದ ಸುನಂದರು ಅವನನ್ನು ನೋಡಲು ಬಂದು, ನಡೆದ ಸಂಗತಿಯನ್ನು ಕೇಳಿ ತಿಳಿದರು. ಈಗ ಆನಂದನು ಮೊದಲಿಗಿಂತಲೂ ಹೆಚ್ಚು ದರಿದ್ರಾವಸ್ಥೆಯಲ್ಲಿದ್ದನು. ಅವನ ಅಂಗಿ ಬಟ್ಟೆಗಳು ಹರಿದಿದ್ದರೆ ಹೊಲಿದುಕೊಳ್ಳಬೇಕೆಂತಲೂ ಅವನಿಗೆ ತೋರಲಿಲ್ಲ. ಕಾರಣ ಕೇಳಿದರೆ "ಹೊಲಿಯುವಾ ಅಂತ ನೋಡಿದೆ. ಮನೇಲಿ ಸೂಜಿ ಇಲ್ಲ. ಹರಿದರೆ ಹರಿಯಲಿ ಬಿಡಯ್ಯ" ಎಂದನು ಬೇಸರದಿಂದ.



ಸುನಂದನು ಅಲ್ಲಿಗೆ ಬರುವಾಗಲೇ ಕೆಲವು ಹೊಸ ಸೂಜಿಗಳನ್ನು ಕೊಂಡುಕೊಂಡಿದ್ದನು. ಅವನು ಒಂದು ಸೂಜಿಯನ್ನು ಆನಂದನ ಕೈಗೆ ಕೊಟ್ಟು, "ತಕ್ಕೋಪ್ಪಾ ಸೂಜಿ. ಮೊದಲು ಬಟ್ಟೆ ಹೊಲಿದುಕೊ" ಎಂದನು. ಆಮೇಲೆ ನಂದ ಸುನಂದರು ಆನಂದನ ಭಾಗ್ಯ ಇಷ್ಟೇ ಎಂದು ಕೊಳ್ಳುತ್ತಾ ಹೊರಟು ಹೋದರು.

ಆದಿನ ರಾತ್ರಿ ಪಕ್ಕದ ಮನೆಯ ಬೆಸ್ತನ ಹೆಂಡತಿ ಆನಂದನ ಹೆಂಡತಿಯ ಹತ್ತಿರ ಬಂದು, "ಅಮ್ಮಾ, ನಿಮ್ಮತ್ರ ಸೂಜಿ ಇದ್ದರೆ ಸ್ವಲ್ಪ ಕೊಡುವಿರಾ? ನಾಳೆ ಬೆಳಂಜಾವಕ್ಕೇ ನಮ್ಮವರೆಲ್ಲ ಬಲೆ ತೆಗೆದು ಕೊಂಡು ಮೀನು ಹಿಡಿಯಲು ಹೋಗುತ್ತಾರೆ. ಬಲೆ ಸ್ವಲ್ಪ ಹೊಲಿಯಬೇಕಾಗಿದೆ. ಸೂಜಿ ಹಿಂದೆ ಕೊಡುವಾಗ ಬಲೆಗೆ ಬಿದ್ದ ಮೊದಲನೇ ಮೀನನ್ನು ನಿಮಗೆ ತಂದುಕೊಡುತ್ತೇನೆ" ಎಂದಳು.

ಆನಂದನ ಹೆಂಡತಿ ಮನೆಯಲ್ಲಿದ್ದ ಸೂಜಿಯನ್ನು ಅವಳಿಗೆ ಕೊಟ್ಟಳು.

ಮಾರಣೇದಿನ ಬೆಸ್ತರು ಧಂಡಿಯಾದ ಮೀನಿನೊಂದಿಗೆ ಮನೆಗಳಿಗೆ ಹಿಂದಿರುಗಿದರು. ಬೆಸ್ತನ ಹೆಂಡತಿ ಮಗಳ ಕೈಗೆ ದೊಡ್ಡದೊಂದು ಮೀನನ್ನು ಕೊಟ್ಟು, ಸೂಜಿಯನ್ನು ಆನಂದನ ಮನೆಗೆ ಹಿಂದೆ ಕಳುಹಿಸಿದಳು. ಆದಿನ ಆ ಮೀನಿನ ಅಡಿಗೆಯನ್ನೇ ಮಾಡೋಣವೆಂದುಕೊಂಡು ಆನಂದನ ಹೆಂಡತಿ ಮೀನನ್ನು ಕೊಯ್ದಳು. ಅದರ ಹೊಟ್ಟೆಯೊಳಗೆ ಗಾಜಿನ ತುಂಡಿನಂತೆ ಯಾವುದೋ ಒಂದು ವಸ್ತು ಸಿದ್ದಿತು. ಅದನ್ನು ತೆಗೆದು ಆಚೆಗೆ ಬಿಸುಟರು. ಆನಂದನ ಮಕ್ಕಳು ಹೊಳೆಯುವ ಆ ವಸ್ತುವಿನಿಂದ ಬೀದಿಯಲ್ಲಿ ಆಡತೊಡಗಿದರು. ಅದನ್ನು ನೋಡಿದ ನಗಗಳ ವರ್ತಕನೊಬ್ಬನು ಆನಂದನ ಬಳಿಗೆ ಬಂದು. "ಈ ಗಾಜಿನ ತುಂಡನ್ನು ನನಗೆ ಮಾರಿಬಿಡು ಆನಂದಾ. ನೂರು ವರಹ ಕೊಡುತ್ತೇನೆ" ಎಂದನು.

ಕೂಡಲೇ ಅದು ಯಾವುದೋ ಬೆಲೆಬಾಳುವ ವಸ್ತುವೆಂದು ಆನಂದನಿಗೆ ಅನುಮಾನವಾಗಿ, ಅದನ್ನು ಹುಡುಕುವಂತೆ ನಟಿಸುತ್ತ, ತನ್ನನ್ನು ಕೇಳದೆ ಅದನ್ನು



ಒಯ್ಯುವುದಕ್ಕೆ ಮಕ್ಕಳಿಗೆ ಬೈದು, ಮಾರುವುದಿಲ್ಲ ವೆಂದು ಹೇಳಿ ನಗಗಳ ವರ್ತಕನನ್ನು ಕಳುಹಿಸಿ ಬಿಟ್ಟನು. ಆ ವಸ್ತುವನ್ನು ನಗರಕ್ಕೆ ತೆಗೆದುಕೊಂಡು ಹೋಗಿ ರತ್ನ ವರ್ತಕರಿಗೆ ತೋರಿಸಿದನು.

ನಿಜಕ್ಕೂ ಅದೊಂದು ಅಮೂಲ್ಯವಾದ ವಜ್ರ ವಾಗಿತ್ತು. ಅದನ್ನು ದೊಡ್ಡ ವರ್ತಕನು ಇಪ್ಪತ್ತು ಸಾವಿರ ವರಹಗಳಿಗೆ ಕೊಂಡುಕೊಂಡನು. ಆ ಧನದಿಂದ ಆನಂದನು ಮನೆ ತೋಟ ಹೊಲಗದ್ದೆ ಗಳನ್ನು ಕೊಂಡುಕೊಂಡು, ಹಗ್ಗದ ಕಾರ್ಯಾಲಯ ವನ್ನು ಬೃಹದಾಕಾರಗೊಳಿಸಿ, ಅನೇಕರಿಗೆ ಕೆಲಸ ಕೊಟ್ಟು, ಲಕ್ಷಾಂತರ ಲಾಭ ಗಳಿಸತೊಡಗಿದನು.

ಬಡ ಆನಂದನು ಅಕಸ್ಮಾತ್ತಾಗಿ ತಮಗಿಂತ ಹೆಚ್ಚಿನ ಧನಿಕನಾದನೆಂದು ತಿಳಿದ ನಂದ ಸುನಂದರು ಅವನನ್ನು ನೋಡಲು ಬಂದರು.

"ನಾನು ಕೊಟ್ಟ ಧನದಿಂದಲೇ ಇಷ್ಟೆಲ್ಲ ಮಾಡಿದೆ ಹೌದಾ ?" ಎಂದನು ನಂದ. ಆನಂದನು ನಡೆದ ಸಂಗತಿಯನ್ನೆಲ್ಲಾ ಮಿತ್ರರೊಂದಿಗೆ ಹೇಳಿದನು.

"ಕಾಲ ಕೂಡಿ ಬಂದಾಗ ನಾನು ಕೊಟ್ಟ ಸೂಜಿಯ ಮೂಲಕವೇ ಆನಂದನು ಧನಿಕನಾದನು. ನೋಡಿದೆಯಾ ನಂದಾ ?" ಎಂದನು ಸುನಂದ. ಆದರೆ ನಂದನು ನಂಬಲಿಲ್ಲ. ಆನಂದನು ತನ್ನ ಧನದಿಂದಲೇ ಅಭಿವೃದ್ಧಿಗೇರಿದ್ದೆಂದೇ ವಾದಿಸಿದನು.

ಹೀಗೆ ಮಾತಾಡುತ್ತ, ಆನಂದನು ತಾನು ಹೊಸದಾಗಿ ಕಟ್ಟಿಸಿದ್ದ ಮನೆಯನ್ನೂ ಪಡಸಾಲೆಯನ್ನೂ ಮಿತ್ರರಿಗೆ ತೋರಿಸಲು ಹೊರಟನು. ಅವರು ಮನೆಯ ಹಿಂಗಡೆಗೆ ಹೋದಾಗ, ಆನಂದನ ಮಕ್ಕಳು ಮರದ ಮೇಲಿದ್ದ ಒಂದು ಹಕ್ಕಿಯ ಗೂಡನ್ನು ಕೆಳಕ್ಕೆ ಬೀಳಿಸಿದರು. ಅದರೊಳಗೆ ಆನಂದನ ಮುಂಡಾಸಿನ ಬಟ್ಟೆಯೂ, ಬಟ್ಟೆಯ ತುದಿಯಲ್ಲಿ ವರಹಗಳ ಗಂಟೂ ಇದ್ದಿತು. ಸರಿಯಾಗಿ ನೂರ ತೊಂಬತ್ತೈದು ವರಹಗಳಿದ್ದುವು.

ಅವರು ಅಲ್ಲಿಂದ ಹೊರಟು ದನಗಳ ಹಟ್ಟಿಗೆ ಬಂದರು. ಅದೇ ಸಮಯದಲ್ಲಿ ಪೇಟೆಯ ಕಡೆಯಿಂದ ಆನಂದನ ಆಳು ತೌಡಿನ ಹೆಡಿಗೆ ಹೊತ್ತುಕೊಂಡು ಬಂದನು. ಅವನು ಅದರ ತೌಡನ್ನು ಬಾನೆ ಯೊಳಗೆ ಹಾಕುತ್ತಿರುವಾಗ, ಕೆಲವು ವರಹಗಳು ಅವನ ಕೈಗೆ ಹತ್ತಿಕೊಂಡವು. ಎಲ್ಲಾ ವರಹಗಳನ್ನೂ ಹುಡುಕಿ ತೆಗೆದಾಗ, ಆನಂದನು ಎರಡನೇ ಸಾರಿ ಕಳೆದುಕೊಂಡ ವರಹಗಳೆಲ್ಲಾ ಸಿಕ್ಕಿದುವು.

ಇದನ್ನು ನೋಡಿದ ಮೇಲೆ ನಂದನು ಆನಂದನ ಮಾತನ್ನು ಪೂರ್ತಿ ನಂಬಿದನು. ಸುನಂದನು ಹೇಳಿದಂತೆ ಕಾಲಯೋಗ ಕೂಡಿ ಬಂದರೆ ಲಕ್ಷ್ಮಿಯ ಪ್ರವೇಶಕ್ಕೆ ಸೂಜಿಯ ರಂಧ್ರವೂ ಸಾಕೆಂದು ನಂದನು ಒಪ್ಪಿಕೊಂಡನು.



# ಬಂಗಾರದ ಬಡವ

ಒಬ್ಬ ಶತದರಿದ್ರುದವನ ಮನೆಗೆ ಸನ್ಯಾಸಿಯೊಬ್ಬನು ಅತಿಥಿಯಾಗಿ ಬಂದನು. ಬಡವನು ತಾನು ಉಪವಾಸವಿದ್ದು, ಸನ್ಯಾಸಿಗೆ ತೃಪ್ತಿಯಾಗುವಂತೆ ಊಟವಿಕ್ಕಿದನು.

ಸನ್ಯಾಸಿ ಅಲ್ಲಿಂದ ಹೋಗುವಾಗ ಆ ಬಡವನಿಗೆ ಎರಡು ಮಂತ್ರಗಳನ್ನು ಉಪದೇಶಿಸಿ, "ಇವೆರಡೂ ನಿನ್ನ ಎರಡು ಕೋರಿಕೆಗಳನ್ನು ತೀರಿಸುತ್ತವೆ" ಎಂದನು.

ಬಡವನು ಕೂಡಲೇ ಧನಿಕನಾಗ ಬೇಕೆಂಬ ಆಸೆಯಿಂದ ಒಂದು ಮಂತ್ರವನ್ನು ಜಪಿಸಿ, ತನ್ನ ಮನೆ ತುಂಬಾ ಬಂಗಾರವಾಗಲೆಂದು ಕೋರಿಕೊಂಡನು. ಹಾಗೆಯೇ ಆಯಿತು. ಅದನ್ನು ನೋಡಿ ಧನಿಕನಿಗೆ ಭಯ ವಾಯಿತು. ಇಷ್ಟು ಬಂಗಾರವು ತನ್ನಲ್ಲಿರುವುದಾಗಿ ತಿಳಿದರೆ, ತನ್ನನ್ನು ಕಳ್ಳನೆಂದು ತಿಳಿದು ರಾಜನು ಸೆರೆ ಮನೆಗೆ ಹಾಕಿಸಿ ಬಿಡಬಹುದಷ್ಟೆ?

ಅಂತಲೇ ಅವನು ಎರಡನೆ ಮಂತ್ರವನ್ನು ಜಪಿಸಿ, "ಈ ಬಂಗಾರವು ನನ್ನ ಹೊರತು ಬೇರೆಯಾರಿಗೂ ಕಾಣಬಾರದು" ಎಂದುಕೊಂಡನು.

ಕೂಡಲೇ ಆ ಮಂತ್ರವೂ ಫಲಿಸಿತು.

ಮತ್ತೇನಿದೆ? ಅವನ ಹೊರತು ಬೇರೆಯಾರಿಗೂ ಕಾಣದ ಆ ಬಂಗಾರದಿಂದ, ಏನೂ ಉಪಯೋಗವಿಲ್ಲದೆ, ಅವನು ಶತ ದರಿದ್ರನಾಗಿಯೇ ಇದ್ದನು.





# ಬುದ್ಧಿಕಲಿಸಿದ ಚೇಳು

ಒಂದು ಊರಿನಲ್ಲಿ ಸುಜಾತೆಯೆಂಬ ಮದುವೆಯ ವಯಸ್ಸು ಬಂದ ಹುಡುಗಿ ಒಂದು ದಿನ ರಾತ್ರಿ ಒಬ್ಬಳೇ ಮನೆಯಲ್ಲಿರುವ ಹಾಗಾಯಿತು. ಅವಳ ತಂದೆ, ಮಗಳಿಗಾಗಿ ಒಂದು ವರನ ಸಂಗತಿ ತಿಳಿದು ಕೊಂಡು ಬರಲಿಕ್ಕಾಗಿ ದೂರದ ಊರಿಗೆ ಹೋದನು. ಹೋಗುವ ಮೊದಲು ಕೆಲಸದವಳ ಮಗಳನ್ನು, ರಾತ್ರಿಯಲ್ಲಿ ತನ್ನ ಮಗಳಿಗೆ ಜತೆಯಾಗಿರಲು ಹೇಳಿದ್ದನು. ರಾತ್ರಿ ಆಕಸ್ಮಿಕವಾಗಿ ಆ ಕೆಲಸದವಳ ಮಗಳ ಗಂಡನಿಗೆ ಫಕ್ಕನೆ ಕಾಹಿಲೆಯೇನೋ ಶುರುವಾಯಿತಂತೆ. ಅವಳು ಹೊರಟು ಹೋಗಿಬಿಟ್ಟಳು. ಸುಜಾತೆಯೊಬ್ಬಳೇ ಬಾಗಿಲು ಭದ್ರಪಡಿಸಿ ದೇವರ ಮೇಲೆ ಭಾರ ಹಾಕಿ ಮಲಗಿಕೊಂಡಳು.

ನಡುರಾತ್ರಿಯ ಹೊತ್ತಿನಲ್ಲಿ ಅವಳು ಒಳ್ಳೆಯ ನಿದ್ದೆಯಲ್ಲಿರುವಾಗ, ತನ್ನ ಬದಿಯಲ್ಲಿಯೇ "ಅಮ್ಮಯ್ಯೋ !" ಎಂಬ ಕೆಟ್ಟ ಆರ್ತನಾದ ಕೇಳಿ ಸುಜಾತೆ ಧಿಡುಕ್ಕನೆದ್ದಳು. ಅವಳ ತಲೆಯ ಹತ್ತಿರ ಕತ್ತಲೆಯಲ್ಲಿ ಯಾವನೋ ಒಬ್ಬನು ನಿಂತುಕೊಂಡು ಕೈ ಜಾಡಿಸಿಕೊಳ್ಳುತ್ತ, ನೋವು ಅನುಭವಿಸುವುದನ್ನು ನೋಡಿ ಅವಳೆದೆ ಝುಲ್ಲೆನಿಸಿತು.

ಬಂದವನು ಯಾರು ? ಇದಿರಿನಲ್ಲಿ ಕಾಣುವ ಅಡಿಗೆ ಕೋಣೆಯ ಮಾಡಿನ ಹೆಂಚು ಕಳಚಲ್ಪಟ್ಟು ನಕ್ಷತ್ರಗಳ ಆಕಾಶ ಸ್ವಲ್ಪ ಕಾಣುತ್ತಿತ್ತು. ಹಾಗೆ ಇಳಿದು ಬಂದಿದ್ದಾನೆ ಕಳ್ಳ. ಭೀತಿಯಿಂದ ಏನು ಮಾಡುವುದೆಂದು ಗೊತ್ತಾಗಲಿಲ್ಲ ಸುಜಾತೆಗೆ.

ಆಗ ಕಳ್ಳ ನೋವಿನ ಗಂಟಲಿನಿಂದ "ಬೇಗ ಎದ್ದು ಈಚೆಗೆ ಬಾ, ನಿನ್ನ ತಲೇ ಕೆಳಗೆ ಚೇಳು !" ಎಂದನು ಕೈಯನ್ನು ಕೊಡರಿಕೊಳ್ಳುತ್ತ. ಅವನು ಸುಜಾತೆಯ ತಲೆದಿಂಬಿನ ಕೆಳಗೆ ಬೀಗದ ಕೈಗಾಗಿ ಹುಡುಕುತ್ತಿದ್ದಾಗ ಚೇಳು ಕುಟುಕಿದೆ.

ಸುಜಾತೆ ತಟಕ್ಕನೆ ಮಂಚದಿಂದ ಕೆಳಗಿಳಿದು ಕೈಗೆಟಕುವ ದೀಪದ ಬತ್ತಿಯನ್ನು ದೊಡ್ಡದು ಮಾಡಿದಳು. ಕಳ್ಳ ತಲೆದಿಂಬನ್ನು ಬದಿಗೆ ತಳ್ಳಿ, ಅಲ್ಲಿದ್ದ ದೊಡ್ಡ ಕರಿ ಚೇಳನ್ನು ಕೆಳಗೆ ತಳ್ಳಿ, ಮೆಟ್ಟಿನಿಂದ ಹೊಡೆದು ಕೊಂದನು.

ಬೆಂಕಿಯಂಥ ಚೇಳಿನ ಕುಟುಕಿನಿಂದ ಕಳ್ಳನು ತನ್ನನ್ನು ಕಾಪಾಡಿದನೆಂದು ಗೊತ್ತಾಗಿ ಕಳ್ಳನ ಮೇಲೆ ಒಂದು ಬಗೆಯ ಕೃತಜ್ಞತೆಯ ಭಾವ ಸುಜಾತೆಗೆ ಬಂತು. "ನೀನು ಹೀನ ಕೆಲಸಕ್ಕೆ ಬಂದವನಾದರೂ

ಎಂ. ಕೆ. ಈಶ್ವರರಾವ್

ಚೇಳು ನಿನಗೆ ಶಿಕ್ಷೆಕೊಟ್ಟು ನನ್ನನ್ನೂ ಉಳಿಸಿತು. ನಿನ್ನನ್ನೂ ಹೊರಗೆ ಹಾಕಿತು. ಹೋಗಲಿ ಮದ್ದು ಹಚ್ಚುತ್ತೇನೆ" ಎಂದು ಸುಜಾತೆ ಅಣಲೆಕಾಯಿ ತೇದು ಅವನ ಬೆರಳಿಗೆ ಹಚ್ಚಿ, ಹಳೆ ಬಟ್ಟೆಯ ಹೊಗೆ ಹಿಡಿಸಿ, ಅವನ ಉರಿ ತಗ್ಗಲು ಊದುತ್ತ ಕುಳಿತಳು.

"ಇಷ್ಟು ದೊಡ್ಡ ಮನೆಯಲ್ಲಿ ಒಬ್ಬಳೇ ಇರುವಿಯೇಕೆ? ನಿನಗೇನೂ ಭಯವಿಲ್ಲವೇ?" ಎಂದು ಕಳ್ಳನು ಕೇಳಿದನು.

"ಈವರೆಗೆ ಒಬ್ಬಳೇ ಇದ್ದಿದ್ದಿಲ್ಲ. ಅಪ್ಪ ಹೊರಗಿನ ಊರಿಗೆ ಹೋಗಿದ್ದಾರೆ. ಅಮ್ಮನೂ ತಮ್ಮನೂ ಮಾವಯ್ಯನ ಊರಿಗೆ ಹೋಗಿದ್ದಾರೆ. ಅದೆಲ್ಲಾ ನಿನಗೇಕೆ? ನೀನು ಓದಿಕೊಂಡಿರುವವನ ಹಾಗಿರುವೆ. ಹೀಗೆ ಕಳ್ಳತನ ಮಾಡಿ ಬದುಕಬೇಕಾದ ಕರ್ಮ ನಿನಗೇಕೆ?" ಎಂದು ಕೇಳಿದಳು ಸುಜಾತೆ.

ಕಳ್ಳನು ಚಿಂತೆಯೂ ನಾಚಿಕೆಯೂ ಬೆರೆತ ಮುಖದಿಂದ "ನಾನು ಪಳಗಿದ ಕಳ್ಳನೇನಲ್ಲ. ಮುರಳಿ ಅಂತ ನನ್ನ ಹೆಸರು. ನನ್ನ ಅಜ್ಜಿ ಬಲು ಮುದ್ದಿನಿಂದ ನನ್ನನ್ನು ಬೆಳೆಸಿದಳು. ಅವಳ ಅತಿರೇಕ ಮಮಕಾರದಿಂದ ವಿದ್ಯೆಯಲ್ಲಿ ದಡ್ಡನಾದೆ. ಕೆಟ್ಟ ಸ್ನೇಹಿತರೊಡನೆ ಸೇರಿದೆ. ಅಜ್ಜಿಯ ಪೆಟ್ಟಿಗೆಯಿಂದ ಚಿಲ್ಲರೆ ಹಣ ಕದಿಯುತ್ತಾ ಇದ್ದೆ. ಇತ್ತೀಚೆಗೆ ಆ ಅಜ್ಜಿ ಹೋಗಿಬಿಟ್ಟಳು. ನಮ್ಮ ಊರಿನಿಂದ ಈ ನಗರಕ್ಕೆ ಬಂದೆ. ಇಲ್ಲಿ ಎಷ್ಟು ಪ್ರಯತ್ನಿಸಿದರೂ ನನಗೇನೂ ಕೆಲಸ ದೊರೆಯದೆ ಮೂರು ದಿನ ಉಪವಾಸವೇ ಇದ್ದೆ. ಕಡೆಗೆ ಉಪಾಯವಿಲ್ಲದೆ ಕಳ್ಳತನದ ಬುದ್ಧಿ ಎದ್ದಿತು. ಈ ಮನೆ ಕಳವಿಗೆ ಸೌಕರ್ಯವಾಗಿ ಕಂಡಿತು, ಸಿಕ್ಕಿದ್ದು ಎತ್ತಿಕೊಂಡು ಹೋಗುವಾ ಅಂತ ಬಂದೆ, ಚೇಳು ಹೊಡೆಯಿತು" ಎಂದನು ನೋವಿನಿಂದ.

ಸುಜಾತೆ ಅವನ ಪರಿಸ್ಥಿತಿಯನ್ನು ತಿಳಿದು ಕನಿಕರಗೊಂಡಳು. ಮನೆಯಲ್ಲಿದ್ದ ಎರಡು ಬಾಳೇ ಹಣ್ಣು



ಮಾವಿನ ಹಣ್ಣುಗಳನ್ನು ಅವನಿಗೆ ತಿನ್ನಲು ಕೊಟ್ಟಳು. ಮುರಳಿ ಸುಲಕ್ಷಣ ಯುವಕನಾಗಿಯೇ ಇದ್ದ. ಆದರೆ ಅವನ ಕಳ್ಳಬುದ್ಧಿ ಅವಳನ್ನು ಕಂಪಿಸುವಂತೆ ಮಾಡುತ್ತಿತ್ತು.

"ನೀನು ಹೊರಗಿನ ಕೋಣೆಯಲ್ಲಿರು. ಬೆಳಗಾದ ಮೇಲೆ ಅಪ್ಪ ಬರುತ್ತಾರೆ. ನೀನು ನನ್ನ ಸ್ನೇಹಿತೆಯ ಅಣ್ಣನೆಂದು ಅಪ್ಪನೊಡನೆ ಹೇಳುತ್ತೇನೆ. ನಿರುದ್ಯೋಗಿಯಾದ ನಿನಗೆ ಏನಾದರೊಂದು ಕೆಲಸ ಕೊಡಿಸುವಂತೆಯೂ ಹೇಳುತ್ತೇನೆ. ಕೆಲಸ ದೊರಕಿದರೆ ಇಂಥ ಹಾಳು ಕೆಲಸಕ್ಕಿಳಿಯದೆ ಸುಖವಾಗಿರಲು ನಿನಗಾಗುತ್ತದಷ್ಟೆ?" ಎಂದಳು ಸುಜಾತೆ.

ಮುರಳಿ ಸಂತೋಷದಿಂದ ತಲೆಯಾಡಿಸಿ ಹೊರಗಿನ ಕೋಣೆಗೆ ಹೋದನು. ಬೆಳಗಾದ ಕೂಡಲೇ ಸುಜಾತೆಯ ತಂದೆ ಬರುವುದರೊಳಗೆ ಅಡಿಗೇ ಮನೆಯ ಮಾಡಿನ ಹಂಚುಗಳನ್ನು ಸರಿ ಮಾಡಿಬಿಟ್ಟನು. ಸೂರ್ಯನು ಮೂರುದ್ದ ಮೇಲೆ

ಬಂದ ಮೇಲೆ ಸುಜಾತೆಯ ತಂದೆ ಮನೆಗೆ ಬಂದನು. ತಂದೆಯ ಮುಖ ನೋಡಿದ ಕೂಡಲೇ, ಹೋದ ಕಾರ್ಯವು ಸರಿಯಾಗಲಿಲ್ಲವೆಂದು ಸುಜಾತೆಗೆ ಗೊತ್ತಾಯಿತು. ಅವಳು ಮುರಳಿಯನ್ನು ತನ್ನ ಸ್ನೇಹಿತೆಯ ಅಣ್ಣನೆಂದು ತಂದೆಗೆ ಪರಿಚಯ ಮಾಡಿಸಿ "ಏನಾದರೂ ಉದ್ಯೋಗ ಹುಡುಕಲು ನಗರಕ್ಕೆ ಬಂದನಂತೆ" ಎಂದಳು.

ಸುಜಾತೆಯ ತಂದೆ ಮುರಳಿಯನ್ನು ಸುಮುಖತೆ ಯಿಂದ ಮಾತಾಡಿಸಿ ಅನೇಕ ಪ್ರಶ್ನೆಗಳನ್ನು ಮಾಡಿದನು. ಮುರಳಿಯೂ ಒಳ್ಳೆಯ ರೀತಿಯಲ್ಲಿ ಉತ್ತರ ಕೊಟ್ಟನು. ಅವನ ವಿನಯ ವಿಧೇಯತೆ ಗಳು ತಂದೆಗೆ ಹಿಡಿಸಿದವು. ಅವನು ಒಂದು ವರ್ಷದಿಂದಲೂ ಮಗಳ ಮದುವೆಗಾಗಿ ಊರೂರು ತಿರುಗಿ ಬೇಸತ್ತು ಹೋಗಿದ್ದನು. ಹಠಾತ್ತಾಗಿ ಅವನಿಗೊಂದು ಆಲೋಚನೆ ಬಂತು. ಅನಾಥ ನಾದರೂ ಒಳ್ಳೆಯವನಾಗಿರುವ ಈ ಮುರಳಿ ಯನ್ನೇ ಅಳಿಯನಾಗಿ ಮಾಡಿಕೊಂಡರೆ ಮನೆಯಲ್ಲೇ ಇರುವನಲ್ಲಾ ಅನಿಸಿತು. ಅಂತಲೇ ಅವನು ಮಗಳನ್ನು ಕರೆದು ಗುಟ್ಟಾಗಿ "ಈ ಮುರಳಿ ನಿನ್ನ ಸ್ನೇಹಿತೆಯ ಅಣ್ಣ ಅಂದ ಮೇಲೆ ಪರಕೀಯನಂತೆ ನೋಡಬೇಕಾಗಿಲ್ಲ. ನೋಡಲಿಕ್ಕೆ ಚೆನ್ನಾಗಿಯೇ ಇದ್ದಾನೆ. ಮಾತು ನಡತೆ ನಮಗೆ ತಕ್ಕಹಾಗೇ ಕಾಣುತ್ತಾನೆ. ಸಾಧುವಾಗಿದ್ದಾನೆ ಪಾಪ. ಇಂಥವನಿಗೆ ಏನಾದರೂ ಉದ್ಯೋಗ ಸಿಕ್ಕದಿರದು ಅಂತ ಇಟ್ಟುಕೋ. ತಾಳ್ಮೆಯಿಂದ ಉದ್ಯೋಗ ಉಳಿಸಿಕೊಂಡು ಸಂಪಾದಿಸಿಯಾನು. ನನಗೇನೋ ಹಿಡಿಸಿದ್ದಾನೆ. ನೀನು ಕೂಡಾ ಒಪ್ಪಿದರೆ ಅವನ ಹತ್ತಿರ ಪ್ರಸ್ತಾವಿಸುತ್ತೇನೆ. ಏನನ್ನುವಿ?" ಎಂದು ಕೇಳಿದನು.

ಸುಜಾತೆ ಕೂಡಲೇ ಏನೂ ಹೇಳದೆ, "ಅವಸರ ಬೇಡಪ್ಪಾ, ಅಮ್ಮನೂ ಬರಲಿ, ನೋಡೋಣ" ಎಂದಳು.

ಅವಳಿಗೆ ಮುರಳಿಯ ಮೇಲೆ ಇನ್ನೂ ಪೂರ್ತಿ ನಂಬುಗೆಯುಂಟಾಗಲಿಲ್ಲ. ಅವಳು ತಂದೆಯೊಡನೆ



ಹೇಳಿದ್ದು ಸುಳ್ಳುತಾನೇ ? ಅವನು ಬೆಳೆದ ಪರಿಸರವೂ ಕೆಟ್ಟ ಸ್ನೇಹಿತರ ಪ್ರಭಾವವೂ ಥಕ್ಕನೆ ಬಿಟ್ಟು ಹೋಗುವಂತಹುದಲ್ಲವೆಂದು ಅವಳಿಗೆ ಅನುಮಾನ ವಿತ್ತು. ಆ ದಿನ ಸಾಯಂಕಾಲ ಮುರಳಿಗೆ ತಮ್ಮ ತೋಟವನ್ನೆಲ್ಲಾ ತಿರುಗಾಡಿಸಿ ತೋರಿಸಿದಳು. ಕತ್ತಲಾದ ಮೇಲೆ ತನ್ನ ನಗಗಳ ಪೆಟ್ಟಿಗೆಯನ್ನು ಅವನಿಗೆ ತೋರಿಸಿ, "ಇವು ನನ್ನ ಮದುವೆಗಾಗಿ ಮಾಡಿಸಿದ ಹೊಸ ನಗಗಳು. ಅಪ್ಪನಿಗೆ ನನ್ನ ಮದುವೆದೇ ಚಿಂತೆ" ಎಂದಳು.

ಆ ರಾತ್ರಿ ಮುರಳಿಗೆ ನಿದ್ದೆಯೇ ಬರಲಿಲ್ಲ. ಅವನ ಕಣ್ಣಿನ ಮುಂದೆ ಸುಜಾತೆ ತೋರಿಸಿದ ನಗಗಳೇ ಹೊಳೆಯುತ್ತಿದ್ದುವು. ಅವುಗಗಳನ್ನು ಎತ್ತಿಕೊಂಡು ಹೋಗಿ ಮಾರಿ ಬರುವ ಹಣದಿಂದ, ಹಾಯಾಗಿ ಬದುಕ ಬಹುದೆಂಬ ಆಲೋಚನೆ ಅವನಿಗೆ ಮೇಲೆ ಮೇಲೆ ಬರತೊಡಗಿತು. ಇದ್ದಷ್ಟು ದಿನ ಒಬ್ಬರ ಕೈ ಕೆಳಗೆ ನೌಕರಿ ಮಾಡುವುದಕ್ಕಿಂತಲೂ ಅದೇ ಒಳ್ಳೆಯ ದೆಂದು ತೋರಿತು.

ಹೀಗೆ ನಿಶ್ಚಯಕ್ಕೆ ಬಂದ ಮುರಳಿ ಮಧ್ಯರಾತ್ರಿಯ ಹೊತ್ತಿನಲ್ಲಿ ನಗಗಳಿರುವ ಆ ಪೆಟ್ಟಿಗೆಯನ್ನೆತ್ತಿಕೊಂಡು, ಹಿಂದಿನ ಬಾಗಿಲಿನ ಮೂಲಕ ಓಡಿ ಹೋದನು. ಅವನು ಸ್ವಲ್ಪ ದೂರ ಹೋದ ಮೇಲೆ ಪೆಟ್ಟಿಗೆ ತನ್ನ ಕೈ ಯಲ್ಲಿರುವುದು ಅಪಾಯಕರವೆಂದು ತೋರಿತು. ಅದರೊಳಗಿನ ನಗಗಳನ್ನು ತೆಗೆದುಕೊಳ್ಳೋಣವೆಂದು ಪೆಟ್ಟಿಗೆಯನ್ನು ತೆರೆದು ಗಾಬರಿ ಬಿದ್ದನು. ನನಗಳ ನಡುವೆ ಒಂದು ಕಪ್ಪು ಚೇಳು !

ಅದೆಲ್ಲಿ ಕುಟುಕುವುದೋ ಎಂಬ ಭೀತಿಯಿಂದ ಅವನು ನಗಗಳ ಪೆಟ್ಟಿಗೆಯನ್ನು ತಟ್ಟನೆ ಕೆಳಗೆ ಬಿಟ್ಟನು. ನಗಗಳೊಂದಿಗೆ ಕೆಳಗೆಬಿದ್ದ ಚೇಳು ಕದಲ ಲಿಲ್ಲ. ಆದು ಚೇಳಿನ ಬೊಂಬೆಯೆಂದು ತಿಳಿಯಿತು. ಮುರಳಿ ಅದನ್ನು ಬದಿಗೆ ಸರಿಸಿ, ನಗಗಳನ್ನು ಆರಿಸಿ ಕೊಳ್ಳುವಾಗ ಅವುಗಳ ನಡುವಿನಲ್ಲಿದ್ದ ಒಂದು ಚೀಟು ಅವನ ಕಣ್ಣಿಗೆ ಬಿತ್ತು. ಸುಜಾತೆ ಅದರಲ್ಲಿ ಹೀಗೆ ಬರೆದಿದ್ದಳು ; ಬೀದಿ ದೀಪದ ಬೆಳಕಿನಲ್ಲೇ ಓದಿದನು. "ಈ ಚೇಳು ಬೊಂಬೆ ಚೇಳಾಗಿರುವುದನ್ನು



ನೋಡಿ ನಿನಗೆ ಸಂತೋಷವಾಗಿರಬಹುದು. ಚೇಳಿನ ಹಾಗೆ ಕಂಡು ಕುಟುಕದೇ ಹೋದರೆ ಚೆನ್ನಾಗಿಯೇ ಇರುತ್ತದೆ. ನೀರು ಹಾವಿನ ಹಾಗೆ ಕಂಡದ್ದು ವಿಷ ಕಕ್ಕಿದರೇನೇ ಅಪಾಯ! ಮೊತ್ತಮೊದಲು ನೀನು ಕಳ್ಳನ ಹಾಗೆ ಬಂದರೂ ಕೇಡುಬಗೆಯಲಿಲ್ಲ. ಈಗ ಈ ಮನೆಗೆ ಭಾವೀ ಅಳಿಯನಾಗುವಂಥ ಸಂದರ್ಭ ವಿದ್ದರೂ ನಗಗಳನ್ನು ಕದ್ದುಕೊಂಡು ಹೋಗುತ್ತಿರುವಿ ಹೌದಾ? ನಾನು ನಿನ್ನ ನಿಜ ಮುಚ್ಚಿಟ್ಟು ತಂದೆಗೆ ಹೇಳಿದ್ದರಿಂದ ನಿನ್ನ ಹೊರ ವೇಷ ನೋಡಿ ತಂದೆಗೆ ನೀನು ಹಿಡಿಸಿದಿಯಂತೆ. ನಿನ್ನಂಥವನು ನನ್ನ ಗಂಡ ನಾಗದೆ ಓಡಿ ಹೋಗುವುದನ್ನು ನೋಡಿ ನನಗೆ ಸಂತೋಷವಾಗುತ್ತದೆ. ಎಲ್ಲಿಗೆ ಓಡುವಿ? ನಿನ್ನನ್ನು ಸೆರೆಮನೆಯ ಅತಿಥಿ ಮಾಡುವುದು ಏನೂ ಕಷ್ಟವಿಲ್ಲ. ಎಲ್ಲಿ ಹೋದರೂ ಬೆಳಗಾದಾಗ ಸಿಕ್ಕಿಬೀಳುವಿ".

ಇದನ್ನು ಓದಿ ಮುರುಳಿ ಹೆದರಿಬಿದ್ದನು. ಸುಜಾತೆಯಂಥವಳನ್ನು ಮದುವೆಯಾಗಿ. ಸಿಗುವ ಉದ್ಯೋಗದಿಂದ ಸುಖವಾಗಿ ಬದುಕ ಬೇಕಾಗಿದ್ದ ತಾನು, ಹೀಗೆ ಕಳ್ಳನಾಗುವುದನ್ನು ನೆನೆದು ಅಸಹ್ಯ ಪಟ್ಟನು. ನಗಗಳನ್ನು ಸುಜಾತೆಗೆ ಒಪ್ಪಿಸಿ ಕ್ಷಮಾಪಣೆ ಕೇಳಿ, ತನ್ನ ಪಾಡಿಗೆ ಹೊರಟು ಹೋಗಲು ನಿಶ್ಚಯಿಸಿದನು. ಬೆಳಂಜಾವದ ಹೊತ್ತಿನಲ್ಲಿ ಅವನು ಸುಜಾತೆಯ ಮನೆಗೆ ಬಂದಾಗ, ಸುಜಾತೆ ಅಡಿಗೆ ಮನೆಯಲ್ಲಿ ನೀರಿನ ಬಿಂದಿಗೆ ಎತ್ತಿಕೊಳ್ಳುತ್ತಿದ್ದಳು. ಆಗಲೇ ಎದ್ದಿದ್ದ ಅವಳ ತಂದೆ ಮುರಳಿಯನ್ನು ನೋಡಿ, "ಬೆಳಗಾಗುವ ಮೊದಲೇ ಈ ಪೆಟ್ಟಿಗೆ ತೆಗೆದು ಕೊಂಡು ಎಲ್ಲಿಗೆ ಹೋಗಿದ್ದೆ?" ಎಂದು ಕೇಳಿದನು. ಅವನು ಉತ್ತರಿಸುವುದರೊಳಗೆ ಸುಜಾತೆ ಹೊರಗೆ ಬಂದು, "ಮತ್ತೇನಿಲ್ಲಪ್ಪಾ. ನನ್ನ ಬಳಿ ಕೈಗೆ ಚುಚ್ಚಿಕೊಳ್ಳುತ್ತಾ ಇತ್ತು. ಅದನ್ನು ತೆಗೆದು ಪೆಟ್ಟಿಗೆ ಯಲ್ಲಿಡಲು ನೋಡುವಾಗ, ಅದರೊಳಗೆ ಹೇಗೋ ಒಂದು ಚೇಳು ಸೇರಿಕೊಂಡಿತ್ತು. ಅದನ್ನು ಕೊಂದು ಬರಲು ಮುರಳಿ ತಕ್ಕೊಂಡು ಹೋದ. ಚೇಳು ಸತ್ತಿತಷ್ಟೆ?" ಎನ್ನುತ್ತಾ ಮುರಳಿಯ ಕೈಯಿಂದ ಪೆಟ್ಟಿಗೆಯನ್ನು ತೆಗೆದುಕೊಂಡಳು.

ತಂದೆ ಆಚೆಗೆ ಹೋದ ಮೇಲೆ ಸುಜಾತೆ ಮುರಳಿ ಯನ್ನು ನೋಡಿ, "ಹೀಗೆ ಬೆಪ್ಪು ಬಡೆದವನ ಹಾಗೆ ನಿಂತೆಯೇಕೆ? ಚೇಳನ್ನು ಪೂರ್ತಿಕೊಂದೆಯಷ್ಟೆ? ಯಾವುದನ್ನಾದರೂ ಅರ್ಧಕೊಲ್ಲುವುದು ಮಹಾ ಪಾಪ!" ಎಂದಳು.

ಅವಳು ತನ್ನೊಳಗಿನ ಕಳ್ಳಬುದ್ಧಿ ಎಂಬ ಚೇಳನ್ನೇ ಹೇಳುವಳೆಂದು ಮುರಳಿ ತಿಳಿದುಕೊಂಡನು. ತಾನು ಕ್ಷಮೆ ಕೇಳುವ ಮೊದಲೇ ಅವಳು ಕ್ಷಮಿಸಿರುವಳೆಂದೂ ಗೊತ್ತಾಗಿ ಕಂಬನಿ ತುಂಬಿದನು.





# ತಿದ್ದಿದ ಹೆಂಡತಿ

ಒಂದು ಊರಿನಲ್ಲಿ ಜಗನ್ನಾಥನೆಂಬವನಿಗೆ ಏನೋ ಸ್ವಲ್ಪ ಪಿತ್ರಾರ್ಜಿತವಿದ್ದುದರಿಂದ, ತಾನು ಸಂಪಾದಿಸಬೇಕೆಂಬ ಆಲೋಚನೆ ಬಿಟ್ಟು ನಿಶ್ಚಿಂತನಾಗಿಯೇ ಇದ್ದನು. ಸ್ನೇಹಿತರೊಂದಿಗೆ ಹರಟೆ ಹೊಡೆಯುತ್ತ ಸಮಯ ಕಳೆಯುತ್ತಿರಲು, ಒಂದು ದಿನ ಇದ್ದಕ್ಕಿದ್ದ ಹಾಗೆ ಅವನಿಗೆ ಏನಾದರೂ ವ್ಯಾಪಾರ ಮಾಡಬೇಕೆಂದು ಬುದ್ಧಿ ಹುಟ್ಟಿತು. ಅವನ ಮಾವನ ಮನೆಯವರು ಒಳ್ಳೆಯ ಸ್ಥಿತಿವಂತರಾಗಿದ್ದರು. ಅಂತಲೇ ಅವನು ಹೆಂಡತಿಯನ್ನು ಕರೆದು, "ನಾನು ಏನಾದರೂ ವ್ಯಾಪಾರ ಮಾಡುವಾ ಅಂತ ಇದ್ದೇನೆ. ನೀನು ನಿನ್ನ ತೌರಿಗೆ ಹೋಗಿ ಒಂದು ಸಾವಿರ ರೂಪಾಯಿ ಕೇಳಿ ತೆಗೆದುಕೊಂಡು ಬಾ" ಎಂದನು.

ಜಗನ್ನಾಥನ ಹೆಂಡತಿ ಲಕ್ಷ್ಮಿಗೆ ತನ್ನ ಗಂಡನ ಗುಣ ಚೆನ್ನಾಗಿ ಗೊತ್ತು. ಬುದ್ಧಿವಂತೆಯಾದುದರಿಂದ ಗಂಡನೊಡನೆ ಮಾತಾಡಿ ಪ್ರಯೋಜನವಿಲ್ಲವೆಂದು ಅರಿತುಕೊಂಡಿದ್ದಳು. ತಾನು ಏನು ವ್ಯಾಪಾರ ಮಾಡುವೆನೆಂಬುದನ್ನು ಕೂಡಾ ನಿರ್ಣಯಿಸದೆ, ಸಾವಿರ ರೂಪಾಯಿಗಳೆಂದರೆ ಏನೋ ಸಾವಿರ ಹುಲ್ಲು ಕಡ್ಡಿಗಳೆಂಬ ಧೋರಣೆಯಲ್ಲಿ ಗಂಡನು ಹೇಳಿದ ಆಜ್ಞೆಯಂತಹ ಮಾತನ್ನು ಕೇಳಿ, ಈ ಸಾರಿ ಬುದ್ಧಿ ಕಲಿಸದೆ ಬಿಡಬಾರದೆಂದುಕೊಂಡು ತವರುಮನೆಗೆ ಹೋದಳು.

ಹೋದವಳು ಎರಡು ತಿಂಗಳಾದರೂ ಹಿಂದಿರುಗಿ ಬರಲಿಲ್ಲ. ಜಗನ್ನಾಥನು ದಾರಿನೋಡಿ ಸಾಕಾಗಿ, ತಾನೇ ಸ್ವತಃ ತನ್ನ ಮಾವನ ಮನೆಗೆ ಹೋದನು.

"ಏನೇ ಇದು ? ನಾನು ನಿನ್ನನ್ನು ಯಾವುದಕ್ಕಾಗಿ ಕಳಿಸಿದ್ದು ? ಆ ಕೆಲಸ ಮರೆತು ಸುಮ್ಮನೆ ಕುಳಿತುಕೊಂಡಿದ್ದೀಯಾ ?" ಎಂದನು ಕೋಪದಿಂದ.

ಲಕ್ಷ್ಮಿ ಸ್ವಲ್ಪವೂ ಹೆದರದೆ, ಸಣ್ಣ ಸ್ವರದಿಂದ, "ಅಯ್ಯೋ ! ಸ್ವಲ್ಪ ಮೆಲ್ಲಗೆ ಮಾತಾಡೀಂದ್ರೆ. ನೀವು ಸಾವಿರ ರೂಪಾಯಿ ತರುವಂತೆ ನನ್ನನ್ನು ಕಳಿಸಿದ್ದು ಮರೆಯುವುದುಂಟೆ ? ನಾನು ಬಂದು ಅಮ್ಮನ ಹತ್ತಿರ ಹೇಳಿದೆ. ಅಮ್ಮ ನನಗೆ ಅಷ್ಟು ಲೆಕ್ಕದ್ದು ಕೊಡಬೇಕಾದರೆ ಇಲ್ಲಿಲ್ಲಾ, ತನ್ನ ತೌರಿಗೆ ಹೋಗಿ ಎರಡು ಸಾವಿರವಾದರೂ ತಂದು ಬಿಡುತ್ತೇನೆ ಅಂದಳು. ಅಮ್ಮ ಅಲ್ಲಿಗೆ ಹೋಗಿ ಕೇಳಿದ ಕೂಡಲೇ, ಅವಳ ಅಮ್ಮ ಅದೇ ನನ್ನ ಅಜ್ಜಿ, ಮೂರು ಸಾವಿರವಾದರೂ ತಂದು ಎರಡು ಸಾವಿರ ಕೊಡುತ್ತೇನೆ ಅಂತ ಹೇಳಿ ಅವರ ತೌರಿಗೆ ಹೋದರಂತೆ,

ಡಿ. ವಿ. ಶೇಷಗಿರಿರಾವ್

ಹೋದವರು ಎಷ್ಟು ದಿನವಾದರೂ ಹಿಂದಿರುಗಿ ಬರಲೇ ಇಲ್ಲ. ನನ್ನಮ್ಮ ನಿನ್ನೆ ತಾನೇ ಇಲ್ಲಿಗೆ ಬಂದಳು. ಇನ್ನು ನಾಲ್ಕೈದು ದಿನ ತಡೆದು ಪುನಃ ಹೋಗ್ತಾಳೆ. ಅವಳು ಹಣ ತಂದು ಕೊಟ್ಟ ಕೂಡಲೇ ನಾನು ಹೊರಟು ಬರುವಾ ಅಂತ ಇದ್ದೆ. ಅಷ್ಟೇ" ಎಂದಳು.

ಜಗನ್ನಾಥನಿಗೆ ಏನು ಹೇಳಲಿಕ್ಕೂ ತೋರದೆ ತಲೆ ತುರಿಸಿಕೊಳ್ಳುತ್ತ, "ಅದಕ್ಕಾಗಿ ನೀನು ಇಲ್ಲೇ ಕುಳಿತಿದ್ದರೆ ಅಲ್ಲಿ ನನಗೆ ಅಡಿಗೇ ಮಾಡಿ ಹಾಕುವವರು ಯಾರು ?" ಎಂದನು ಕೋಪದಿಂದಲೇ.

ಲಕ್ಷ್ಮಿ ತುಂಬಾ ಶಾಂತತೆಯಲ್ಲಿ, "ಅಡಿಗೆಗೇನ್ರೀ ಮಹಾ ? ಸಂಪಾದಿಸಿ ತಂದು ಹಾಕುವವರಿದ್ರೆ ಯಾರಾದರೂ ಬೇಯಿಸಿಹಾಕ್ತಾರೆ. ಅಡಿಗೇನೂ ನಾನೇ ಮಾಡ್ಬೇಕೂ, ಸಂಪಾದಿಸಿಯೂ ನಾನೇ ತರಬೇಕೂ ಅಂದರೆ ಹೇಗೆ ನಡೆದೀತು ಹೇಳಿ ?" ಎಂದಳು.

ಆ ಮಾತು ತನ್ನ ಕೈಲಾಗದ ತನಕ್ಕೆ ಕಿವಿಹಿಂಡಿದ್ದ ಹಾಗಾಯಿತು ಜಗನ್ನಾಥನಿಗೆ. "ಸರಿಸರಿ, ಹಣದ ವಿಷಯ ಆಮೇಲೆ ನೋಡುವ, ಈಗ ಮನೆಗೆ ಹೊರಡು" ಎಂದನು. "ನೀವೇ ಬಂದು ಕರೆಯುವಾಗ ಹೊರಡದಿರುವೆನೇ ?" ಎಂದು ಅವಳು ಪ್ರಯಾಣಕ್ಕೆ ತಯಾರಾದಳು. ಜಗನ್ನಾಥನು ಹೆಂಡತಿಯನ್ನು ಕರೆದೊಯ್ಯಲು ಬಂದನೆಂದು ತಿಳಿದು ಅವನ ಅತ್ತೆ ವಿಚಾರ ವ್ಯಕ್ತಪಡಿಸುತ್ತ, "ವ್ಯತ್ಯಾಸವಾಗಿ ತಿಳಿದು ಬಿಡಬೇಡಪ್ಪಾ, ನಾನು ನನ್ನ ತೌರಿನಿಂದ ಹಣ ತಂದ ಕೂಡಲೇ ನೀನು ಕೇಳಿದ್ದು ಕಳಿಸಿಬಿಡುತ್ತೇನೆ. ಲಕ್ಷ್ಮಿಯ ಅಪ್ಪ ಯಾವುದಕ್ಕೂ ಆಗದವರಾದ್ದರಿಂದಲೇ ಲಕ್ಷ್ಮಿ ಕೇಳಿದ ಕೂಡಲೇ ಹಣಕೊಡಲು ನನ್ನ ಕೈಯಲ್ಲಿರಲಿಲ್ಲ. ಆದ್ದರಿಂದಲೇ ತೌರಿಗೆ ಹೋಗಿ ನನ್ನಮ್ಮನನ್ನು ಕೇಳಬೇಕಾದ ಖರ್ಮ ನನಗೆ ಬಂದದ್ದು. ಹೆಣ್ಣಿನ ದುಡ್ಡಿನಿಂದಲೇ ಬದುಕಬೇಕೆಂಬ ಗಂಡುಗಳಿರುವ ವರೆಗೂ ಯಾವಳಿಗೂ ಈ ಕಷ್ಟ ತಪ್ಪಿದ್ದಲ್ಲಾನ್ನು" ಎಂದಳು.

ಅತ್ತೆಯ ಮಾತುಗಳು ಎಷ್ಟು ಮೃದುವಾಗಿ ಮರ್ಯಾದೆಯಾಗಿದ್ದರೂ ಅದರೊಂದಿಗಿದ್ದ ಹಳಿಕೆಯೂ ಎಚ್ಚರಿಕೆಯೂ ಜಗನ್ನಾಥನಿಗೆ ಅರ್ಥವಾಗಿ ನಾಚಿಕೆಯಾಯಿತು. ಅವನು ತಲೆತಗ್ಗಿಸಿಕೊಂಡು, "ನೀವೇನೂ ಹಣಕ್ಕಾಗಿ ಕಷ್ಟಪಡಬೇಕಾಗಿಲ್ಲ ಅತ್ತೇ. ನಾನೇನೋ ಮಾತಿನ ವರಿಸೇಲಿ ಹೇಳಿದ ಕೂಡಲೇ ಅವಳು ತರುತ್ತೇನೆ ಅಂದು ಇಲ್ಲಿಗೆ ಬಂದು ಕುಳಿತಳು. ಹಣವೇನೂ ಮುಖ್ಯವಲ್ಲ. ಒಳ್ಳೆಯ ಗುಣವಿದ್ದರೆ ಯಾರಾದರೂ ಸಹಾಯಮಾಡುತ್ತಾರೆ. ಅದೆಲ್ಲಾ ನಾನು ನೋಡಿಕೊಳ್ತೇನೆ ಅತ್ತೇ" ಎಂದು ಹೆಂಡತಿಯೊಂದಿಗೆ ಗಾಡಿಯಲ್ಲಿ ಕುಳಿತು ಮನೆಗೆ ಹೊರಟನು.

ಆಮೇಲೆ ಜಗನ್ನಾಥನು ಹರಟೆಯಲ್ಲಿ ಕಾಲ ಕಳೆಯುವುದನ್ನು ಬಿಟ್ಟು. ಚಿಕ್ಕದೊಂದು ವ್ಯಾಪಾರವನ್ನು ಪ್ರಾರಂಭಿಸಿ ಅಭಿವೃದ್ಧಿಗೆ ಬಂದನು.








ಮುದ್ದು ಗಣಪತಿಯನ್ನು ನೋಡಿದ ಕೂಡಲೇ ಪಾರ್ವತಿಯ ಹೃದಯದಲ್ಲಿ ಪುತ್ರ ವಾತ್ಸಲ್ಯವು ಉಕ್ಕಿತು. ದುಃಖವೆಲ್ಲಾ ಹಾರಿಹೋಯಿತು. ಮಗುವಿನ ದೃಷ್ಟಿ ತೆಗೆದುನಿಟಿಕೆ ಮುರಿದು, ಅವನ ಪುಟ್ಟ ಮೆತ್ತಗಿನ ಗಜಶಿರವನ್ನು ತಡವಿ ಆಘ್ರಾಣಿಸಿ, ಎತ್ತಿಕೊಂಡು ಮುದ್ದಿಸಿದಳು.

ಅದನ್ನು ನೋಡಿದ ಕೂಡಲೇ ಶಿವನಲ್ಲಿ ಪುತ್ರ ವಾತ್ಸಲ್ಯವು ತುಂಬಿ ಬಂತು. ಗಣೇಶನನ್ನು ಎತ್ತಿಕೊಳ್ಳಬೇಕೆನಿಸಿ ಕೈಗಳನ್ನು ಚಾಚಿದನು. ಕೂಡಲೇ ಗಣಪತಿ ಪಾರ್ವತಿಯ ಕೈಯಿಂದ ಜಾರಿ, ಶಿವನು ಮತ್ತೆ ತನಗೇನು ಮಾಡುವನೋ ಎಂಬ ಭಯದಿಂದ ತಪ್ಪಡಿಗಳಿಡುತ್ತ ದೂರ ಓಡುವ ಬಾಲ ಗಣಪತಿಯ ಚೇಷ್ಟೆ ನೋಡಿ, ಎಲ್ಲರೂ ಗಲಗಲ ನಕ್ಕರು.

ಶಿವನು ಓಡಿ ಅವನನ್ನು ಹಿಡಿದೆತ್ತಿ, "ಕಂದಾ. ವಿಘ್ನೇಶ್ವರಾ ! ನಿನ್ನನ್ನು ಮಗನಾಗಿ ಪಡೆದು ನಾವು ಧನ್ಯರಾದೆವು ! ಚಿರಂಜೀವಿಯಾಗಿರು !" ಎಂದು ಮುದ್ದಾಡಿದನು. ವಿಘ್ನೇಶ್ವರನು ಕೆಳಗೆ ಹಾರಿ, "ಏನು ಮಾತು ಹೇಳಿದಿರಿ ಅಪ್ಪಾ ! ನಾನು ನಿಮ್ಮ ಮಗ. ಧನ್ಯನಾದವನು ನಾನು !" ಎಂದು ಹೇಳಿ, ಪಾರ್ವತಿಯ ಪಾದಗಳನ್ನು ಪುಟ್ಟ ಸೊಂಡಿಲಿನಿಂದ ಮುಟ್ಟಿ ಕಣ್ಣೆಗೊತ್ತಿಕೊಂಡನು. ಆಮೇಲೆ ಗಣಪತಿ ವಿಷ್ಣುವಿನ ಮುಂದೆ ಹೋಗಿ ಅಡ್ಡಬಿದ್ದನು.

ವಿಷ್ಣು ನಗುತ್ತ "ಬಾರೋ ನನ್ನ ಸೋದರ ಅಳಿಯನೇ !" ಎಂದು ಅವನನ್ನು ಎಬ್ಬಿಸಿ ಎಳೆದುಕೊಂಡು "ಕಲ್ಯಾಣಮಸ್ತು" ಎಂದು ಆಶೀರ್ವಾದ ಮಾಡಿದನು.

ಆಗ ವಿಷ್ಣುವಿನ ಕಾಂತಿಯೊಂದಿಗೆ ವಿಘ್ನೇಶ್ವರನು ನೀಲಾಕಾಶದ ರಂಗಿನಲ್ಲಿ ದಿವ್ಯನಾಗಿ ಬೆಳಗಿದನು. ನೋಡುವವರ ಮನಸ್ಸಿಗೆ ವಿಷ್ಣು ವಿಘ್ನೇಶ್ವರರಲ್ಲಿ ಯಾವುದೋ ಹೋಲಿಕೆ ಇರುವಂತೆ ಕಾಣಿಸಿತು. ಸೋದರಮಾವ ಸಂಬಂಧವೆಂದರೆ ಇದೇ ಎನಿಸಿತು ಎಲ್ಲರಿಗೂ.

ಅಲ್ಲಿಂದ ವಿನಾಯಕನು ಬ್ರಹ್ಮನಿಗೂ ನಮಸ್ಕಾರ ಮಾಡಿದನು. "ಪ್ರಥಮ ಪೂಜಿತನಾಗಿರೋ ಬೊಜ್ಜು




ಗಣಪಯ್ಯಾ !" ಎಂದು ಹೇಳುತ್ತಾ ಬ್ರಹ್ಮನು ಅವನ ಸೊಂಡಿಲನ್ನು ಚಿವುಟಿ ಡೊಳ್ಳು ಹೊಟ್ಟೆಯನ್ನು ತಟ್ಟಿದನು.

ಆಮೇಲೆ ವಿಘ್ನೇಶ್ವರನು ಲಕ್ಷ್ಮಿಗೂ ಸರಸ್ವತಿಗೂ ನಮಸ್ಕಾರ ಮಾಡಿದನು. ಅವರಿಬ್ಬರೂ ಕೂಡಿಯೇ ಅವನನ್ನು ಎತ್ತಿಕೊಂಡು ಅವನ ಆನೆಗಲ್ಲಗಳಿಗೆ ಮುದ್ದಿಟ್ಟು, "ನಾವು ಈ ವಿಘ್ನೇಶ್ವರನ ಎರಡು ಬದಿಗಳಲ್ಲಿಯೂ ಅತ್ತೆ ಸೊಸೇ ಕಚ್ಚಾಟ ಮರೆತು ಹೀಗೇ ಸ್ನೇಹದಲ್ಲಿರುತ್ತೇವೆ" ಎಂದು ಹೇಳಿ ಪಾರ್ವತಿಯನ್ನು ನೋಡಿ "ಏನಮ್ಮಾ ಪಾರ್ವತೀ ! ನಾವು ಮೂವರೂ ಒಂದೇ ಮೂರಮ್ಮಗಳ ಒಡಹುಟ್ಟುಗಳೆಂದು ಮಹಾಜ್ಞಾನಿಯಾದ ಈ ಪುತ್ರ ಗಣಪತಿ ವಿವರಿಸಿ ಹೇಳಿಯೇ ಇದ್ದಾನೆ. ಆಮೇಲೆ ನಾವು ಬಿಡಿಬಿಡಿಯಾಗಿ ಮತ್ತೆ ಕ್ಷೀರಸಾಗರದಿಂದ ಲಕ್ಷ್ಮಿಯಾಗಿ, ಬ್ರಹ್ಮನ ನಾಲಗೆಯಿಂದ ಸರಸ್ವತೀ ವಾಣಿಯಾಗಿ, ಮೊದಲು ದಕ್ಷಪುತ್ರಿಯಾಗಿದ್ದು ಆಮೇಲೆ ಪಾರ್ವತೀ ಉಮೆಯಾಗಿ ಅವತರಿಸಿದವರು. ಅಂತಹ ನಾವು ಹೇಳುತ್ತೇವೆ : ಜಯಲಕ್ಷ್ಮಿ ಎಂಬ ಸಿದ್ಧಿಯೂ ವಿದ್ಯಾವತಿ ಎಂಬ ಬುದ್ಧಿಯೂ ಈ ವಿನಾಯಕನಿಗೆ ತಕ್ಕ ವಧುಗಳು. ಇನ್ನು ವಿಘ್ನೇಶ್ವರನ ಮದುವೆಯ ಸಂಭ್ರಮ ನೋಡಬೇಕು ನಾವು" ಎಂದರು.

"ನಾನಂತೂ ಇವನು ಮದುವೆಯಾದರೂ ಇವನನ್ನು ಸ್ಥಿರವಾಗಿ ಅಂಟಿಕೊಂಡಿದ್ದು ಲಕ್ಷ್ಮೀಕರ ವಿಘ್ನೇಶ್ವರನೆಂದು ಇವನಿಗೆ ಹೆಸರು ಬರಿಸುತ್ತೇನೆ. ಸಿದ್ಧಿ ಸ್ವರೂಪಿಣಿಯಾದ ಜಯಲಕ್ಷ್ಮಿ ನನ್ನ ಅಂಶದವಳೇ ಆದ್ದರಿಂದ ಇದಕ್ಕೆ ಆಕ್ಷೇಪಣೆ ಹೇಳಲಾರಳು" ಎಂದಳು ಲಕ್ಷ್ಮಿ.

"ನಾನೂ ವಿಘ್ನೇಶ್ವರನನ್ನು ಬಿಡಲಾರೆ. ಜ್ಞಾನ ಪ್ರದಾತನಾಗುವಂತೆ ವಿಜ್ಞಾನದಾಯಕನಾಗುವಂತೆ ನಾನೂ ಇವನೊಂದಿಗಿರುತ್ತೇನೆ. ಮಕ್ಕಳಿಗೆ ಅಕ್ಷರಾಭ್ಯಾಸಕ್ಕೆ ಮೊದಲು ಮಕ್ಕಳಿಂದ ಅರಸಿನ ಮುದ್ದೆಯ ವಿಘ್ನೇಶ್ವರನಿಗೆ ಪೂಜೆ ಮಾಡಿಸಿ, ವಿಘ್ನೇಶ್ವರನ ಪರಿಪೂರ್ಣ ಸ್ವರೂಪ ಸಂಕೇತವಾದ ಓಂ ಶ್ರೀ ಸುತ್ತಿಸಿ ಇವನಿಗೆ ನಮಸ್ಕರಿಸುವಂತೆ ನನ್ನ ಅಂಶದವಳಾದ ವಿದ್ಯಾವತಿ ಬುದ್ಧಿರೂಪಿಣಿಯಾಗಿ ಇವನ ನಾಯಕಿಯಾಗಿದ್ದು ಮಾಡಿಸುತ್ತಾಳೆ" ಎಂದಳು ಸರಸ್ವತಿ.

ಆಗ ವಿಘ್ನೇಶ್ವರನು ಚಿಂತೆಯ ಮುಖ ಮಾಡಿಕೊಂಡು ಎಲ್ಲರನ್ನೂ ನೋಡಿ, "ನೋಡಿದಿರಾ. ದೊಡ್ಡವರ ರೀತಿ ಹೇಗಿದೆಯೆಂದು ? ಮದುವೆ ಮಾಡಿಕೊಂಡು ಅವರು ಪಡುವ ಕಷ್ಟಾವಸ್ಥೆಗಳನ್ನೆಲ್ಲಾ ಮಕ್ಕಳು ಕೂಡಾ ಪಡಬೇಕೆಂದು ಮದುವೆ ಮಾಡುವ ಅವಸರ ತೋರಿಸುತ್ತಾರೆಯೇ ಹೊರತು ಹಾಯಾಗಿರಲು ಬಿಡುವವರಲ್ಲ. ಅದರಲ್ಲೂ ಅಮ್ಮಂದಿರಿಗೆ ಹೆಚ್ಚು ಅವಸರ ! ಸಂಭ್ರಮ !" ಎಂದನು.

ಆಗ ವಿಷ್ಣು, "ಹಾಗಲ್ಲವೋ ಕಂದಾ, ಅಣಿಮಾದಿ ಸಿದ್ಧಿಗಳಿಗೂ, ಅಷ್ಟೈಶ್ವರ್ಯಗಳಿಗೂ ಮೂಲವಾಗಿ

ಎಂಟುಮಂದಿ ಸಿದ್ಧಿಗಳಿದ್ದಾರೆ. ನಕ್ಷತ್ರಗಳು ಪೂರ್ಣ ಚಂದ್ರನನ್ನು ಸೇವಿಸುವ ಚಂದದಲ್ಲಿ ನಿನ್ನನ್ನೂ ಸಹ ನೋಡಬೇಕೆಂದು ಎಲ್ಲರಿಗೂ ಆಶೆ, ಅವಸರ" ಎಂದನು. " ಓಹೋ ! ಹಾಗೇನು ? ಸರಿಸರಿ. ನೀನು ಮುಂದೆ ಕೃಷ್ಣಾವತಾರದಲ್ಲಿ ಅಷ್ಟ ಮಹಿಷಿಗಳೊಂದಿಗೆ ಆನಂದವಾಗಿರುವಿಯಂತೆ. ನನಗೆ ಬೇಡಪ್ಪಾ !" ಎಂದನು ವಿನಾಯಕ.



ವಿಷ್ಣು ಮಂದಹಾಸದಿಂದ, "ನಿನ್ನ ಮಾತು ಖಂಡಿತಾ ನಡೆಯುತ್ತದೆ. ನಿನಗೆ ಮಾತ್ರ ಹತ್ತು ಮಂದಿ ವಧುಗಳೊಂದಿಗೆ ಮದುವೆಯಾಗುವುದೂ ಖಂಡಿತ ! ನೆನಪಿಟ್ಟುಕೋ " ಎಂದನು.

" ಹಾಗಿದ್ದರೆ ವಿಘ್ನೇಶ್ವರನ ವಿವಾಹಕ್ಕೆ ವಿಘ್ನದ ಮೇಲೆ ವಿಘ್ನವೆಂದು ಗಾದೆ ಹುಟ್ಟುವ ಹಾಗೆ ಮಾಡುತ್ತೇನೆ. ನೋಡಿ ಬಿಡುವಾ " ಎಂದನು ವಿಘ್ನೇಶ್ವರ.

" ಸಾವಿರ ವಿಘ್ನಗಳು ಬಂದರೂ ವಿಘ್ನೇಶ್ವರನ ವಿವಾಹ ತಪ್ಪದು !" ಎಂದು ಬ್ರಹ್ಮನು ಹೇಳುತ್ತಲೇ, ಅವನ ಸ್ವರದೊಂದಿಗೆ ಹೌದು ಹೌದೆಂದು ಎಲ್ಲರೂ ಸ್ವರ ಸೇರಿಸಿದರು.

ಆಗ ನಾರದನು ಮುಂದೆ ಬಂದು, " ಅಲ್ಲಯ್ಯಾ ವಿಜ್ಞಾನೇಶ್ವರಾ ! ನೀನು ವಾಚಾಳಿತನದಲ್ಲಿ ನನ್ನನ್ನೇ ಮೀರಿಸಿ ಬಿಟ್ಟೆಯಾದರೂ. ಮದುವೆಯಿಂದ ತಪ್ಪಿಸಿಕೊಳ್ಳಲು ಯಾರಿಂದಾದೀತು ? ನಾನು ಸಂಸಾರ ಸಾಗರದಲ್ಲಿ ಈಜಲು ಕೈಲಾಗದ್ದರಿಂದಲೇ ಹೀಗೆ ಸನ್ಯಾಸಿಯಾಗಿ ತಿರುಗುತ್ತಿದ್ದೇನೆ. ಅಪ್ಪಾ ಜ್ಞಾನೇಶ್ವರಾ! ಕಲ್ಯಾಣ ಮಸ್ತು ಎಂಬುದಕ್ಕೆ ತಲೆ ಬಾಗಿಬಿಡು. ಉದ್ಯೋಗವೇ ಪುರುಷಲಕ್ಷಣವಾದುದರಿಂದ ಪುರುಷೋತ್ತಮರಾದ ಆದಿ ದೇವತೆಗಳೆನಿಸಿದ ಪ್ರಮುಖರೆಲ್ಲಾ ಮದುವೆ ಮಾಡಿಕೊಂಡು ಸೃಷ್ಟಿ ಸ್ಥಿತಿಲಯಗಳೆಂಬ ಉದ್ಯೋಗದಲ್ಲಿ ನಿರತರಾಗಿದ್ದಾರೆ. ಉದ್ಯೋಗಿಗಳಿಗೆ ನವಚೇತನ ಬರಬೇಕಾದರೆ ಹೆಂಡತಿಯರೂ ಬೇಕಲ್ಲ ? ಈ ನಿಯಮವನ್ನು ತಪ್ಪಿಸಿಕೊಳ್ಳಬೇಕೆಂದರೆ, ನೀನೂ ನಾನೂ ಯಾವ ಮೂಲೆಯವರೋ !" ಎಂದನು.

ವಿಘ್ನೇಶ್ವರನು ನಕ್ಕು, " ಓಹ್ಹೊ ! ನಿನಗೂ ಮದುವೇ ಹುಚ್ಚು ತಗಲಿದ ಹಾಗಿದೆ! ಸ್ವಯಂವರಕ್ಕೆ ಕೂಡಾ ಹೊರಡುವ ಉತ್ಸಾಹದಲ್ಲಿರುವಿಯೆಂದು ಕಾಣುತ್ತದಲ್ಲ !" ಎಂದನು.

" ತ್ರಿಕಾಲವೇದಿ ನಾನೇ ಅಂದುಕೊಂಡರೆ, ನೀನು ಅನಂತಕಾಲವೇದಿಯಾಗಿರುವಿಯಪ್ಪ ! ನಿನ್ನೊಂದಿಗೆ ವಾದ ಮಾಡಲು ನನ್ನಿಂದಾಗದು. ಎಲ್ಲರ ಜಾತಕಗಳೂ ನಿನ್ನ ಕೈಯಲ್ಲೇ ಇವೆ. ನಿನ್ನನ್ನು ಮರೆತ ಎಂತಹ ಉದ್ದಂಡ ಜ್ಯೋತಿಷ್ಯನ ಪಾಂಡಿತ್ಯವೂ ಫಲಿಸಲಾರದು. ನಾವಿಬ್ಬರೂ ಮೇಲ್ತರಗತಿಯ ವಾಚಾಳಿಗಳಾಧೆವು. ಹೀಗೆ ಮಾತಿಗಿಳಿದರೆ ಅನಂತಕಾಲವೂ ನಮಗೆ ಸಾಲದು. ನೀನಂತೂ ಪೂರ್ಣ ಜ್ಞಾನಿ. ನಮ್ಮಂತಹ ಅರ್ಧ ಜ್ಞಾನಿಗಳು ಎಂತಹ ಹುಚ್ಚಿನಲ್ಲಿ



ಬಿದ್ದರೂ ನಿನ್ನಂಥವರು ತಾಮರೆ ಎಲೆಯ ನೀರ ಬಿಂದುವಿನ ಹಾಗೆ ಯಾವುದಕ್ಕೂ ಅಂಟುವವರಲ್ಲ. ನೀನು ಮಾಯೆಗೆ ಅತೀತನಾಗಿರುವುದರಿಂದ ನಾನೂ ನಿನ್ನನ್ನು ಬಾಯಿ ತುಂಬ ಹರಸಿಬಿಡುತ್ತೇನೆ. ಅಪ್ಪಣೆ ಕೊಡು ! ಶ್ರೀರಸ್ತು, ಶುಭಮಸ್ತು, ಶೀಘ್ರಕಲ್ಯಾಣ ಸಿದ್ಧಿರಸ್ತು " ಎಂದು ಹೇಳಿ ನಾರದನು ತನ್ನ ಮಹತೀ ವೀಣೆಯ ಮೇಲೆ ಕಲ್ಯಾಣೀ ರಾಗವನ್ನು ಪ್ರಾರಂಭಿಸಿ, ಸೋಮರಾಗವನ್ನು ಹಿಡಿದು, ಸೌರಾಷ್ಟ್ರ ರಾಗದಿಂದ ಮಂಗಳ ಗೀತವನ್ನು ಹಾಡುತ್ತಾ, ಹೊರಟು ಹೋದನು.

ಆಮೇಲೆ ದೇವತೆಗಳೆಲ್ಲಾ ಸಂತೋಷದಿಂದ ಅವರವರ ಸ್ಥಳಕ್ಕೆ ಹೊರಟು ಹೋದರು. ವಿಘ್ನೇಶ್ವರ ನನ್ನೂ ಪಾರ್ವತಿಯನ್ನೂ ಕರೆದುಕೊಂಡು ಶಿವನು ತನ್ನ ಕೈಲಾಸ ಭವನದೊಳಗೆ ಹೋದನು. ನಾರದನು ನೇರಾಗಿ ವಜ್ರದಂತನ ಬಳಿಗೆ ಹೋಗಿ, " ನಾರಾಯಣ" ಎಂದು ಧ್ವನಿಯೆಬ್ಬಿಸಿದನು.

ಈ ಮೊದಲು ಪುತ್ರಗಣಪತಿ ಆ ಮಾಯಾವಿಯ ಮೂಷಿಕ ರೂಪದ ಬಾಲವನ್ನು ಹಿಡಿದು ಬೀಸಿ ಬಿಸುಟಾಗ, ತನ್ನ ಮನೆಯ ಮುಂದೆ ಬಿದ್ದವನ ಮೈ ನೋವುಗಳು ಇನ್ನೂ ಪೂರ್ತಿ ಗುಣವಾಗಿದ್ದಿಲ್ಲ. ಅವನ ಪತ್ನಿ ಧವಳೆ ಗಂಡನ ಪರಿಚರ್ಯೆ ಮಾಡಿಕೊಂಡಿದ್ದಳು. ಒಮ್ಮೆಗೇ ಬಂದ ನಾರದನನ್ನು ನೋಡಿ ಇವನೇನು ತಂಟೆತರುವನೋ ಎಂದು ಅವಳಿಗೆ ಭಯವಾಯಿತು. ನಾರದನನ್ನು ನೋಡಿದ ಕೂಡಲೇ, ಮಾತಾಡದೆ ಎದ್ದು ಒಳಗೆ ಹೋಗಿಬಿಟ್ಟಳು.

ನಾರದನು ಮೂಷಿಕಾಸುರನಾದ ವಜ್ರದಂತ ನೊಂದಿಗೆ, " ಹೊಸ ಸುದ್ದಿ ಗೊತ್ತಿದೆಯೇ ? ನಿನ್ನನ್ನು ಪರಾಭವಿಸಿದ ಗಣಪತಿ ಈಗ ವಿಘ್ನೇಶ್ವರನಾಗಿ ಅಭಿವೃದ್ಧಿಗೆ ಬರಲು ತೊಡಗಿದ್ದಾನೆ. ಯೋಚನೆ ಮಾಡು " ಎಂದು ಸುಮ್ಮನಾದನು.

ನಾರದನ ಮಾತು ಅವನ ಪರಾಭವಾಗ್ನಿಗೆ ತುಪ್ಪ ವಾಯಿತು. ಅವನು ಕೋಪಗೊಂಡರೂ ಭಯ ಬೆರೆತ ಮುಖದಿಂದ, " ನನ್ನನ್ನು ಏನು ಮಾಡಲು ಹೇಳುವೆ ನಾರದಾ ? ಮರೆಮಾಜದೆ ಹೇಳು " ಎಂದು ಕೇಳಿದನು.

" ವರದಾತದೇವ ಬ್ರಹ್ಮನಿದ್ದಾನೆ. ವಜ್ರವನ್ನು ವಜ್ರದಿಂದಲೇ ಕೊಯ್ಯಬೇಕು. ಪ್ರತೀಕಾರ ಸಾಧಿಸ ದಿದ್ದರೆ ನೀನು ಮುಖವೆತ್ತಿ ತಿರುಗುವ ಬಗೆ ಹೇಗೆ ? ಗಣಪತಿ ಈಗ ವಿಘ್ನೇಶ್ವರ ನಾಮಧಾರಿಯಾದ ಗಜ ಮುಖನೆಂಬುದನ್ನು ಮರೆಯಬೇಡ ! ಸೂಚಿಸುವು ದಷ್ಟೇ ನನ್ನ ಕೆಲಸ " ಎಂದು ಹೇಳಿ ಅಲ್ಲಿಂದ ಹೊರಟು ಹೋದನು ನಾರದ.

ಮಹಾಶ್ವೇತೆ ಎಂಬ ನಾಮಾಂತರವುಳ್ಳ ಧವಳೆ ಗಂಡನಿಗೆ ಎಷ್ಟು ಬುದ್ಧಿ ಹೇಳಿದರೂ ಕೇಳದೆ ವಜ್ರದಂತನು. " ನೋಡು ಮಹಾಶ್ವೇತಾ ! ಗಂಡು ಗಲಿಯಾದವನು ಸೋಲಿನ ಅವಮಾನವನ್ನು ತಾಳಿ ಕೊಳ್ಳಲಾರನು. ಅದಕ್ಕಿಂತ ಸಾವೇ ಮೇಲು. ನಿನ್ನ

ಮಾಂಗಲ್ಯ ಪ್ರಭಾವದಿಂದ ನನಗಂತೂ ಸಾವಿನ ಭಯವಿಲ್ಲ. ಪ್ರತೀಕಾರವಾದರೂ ಮಾಡಿ ಮನಸ್ಸಿಗೆ ಶಾಂತಿ ಬರುವ ಹಾಗೆ ಮಾಡು !" ಎಂದು ಹೇಳಿ ತಪಸ್ಸಿಗೆ ಹೋದನು. ಘೋರವಾದ ತಪಸ್ಸು ಮಾಡಿ ಬ್ರಹ್ಮನನ್ನು ಪ್ರಸನ್ನೀ ಕರಿಸಿಕೊಂಡನು.

"ಏನು ವರಬೇಕಪ್ಪಾ ನಿನಗೆ ?" ಎಂದು ಬ್ರಹ್ಮನು ಕೇಳಿದನು.

"ವಿಘ್ನಕ್ಕೆ ರೂಪವನ್ನು ಕಲ್ಪಿಸಿ ನನ್ನ ಆಜ್ಞಾನುವರ್ತಿಯಾಗಿರುವಂತೆ ಮಾಡು" ಎಂದು ಮೂಷಿಕಾಸುರನು ವರ ಕೇಳಿದನು.

ಬ್ರಹ್ಮನು ವಿಘ್ನವನ್ನು ಆವಾಹನೆ ಮಾಡಿ ಪ್ರತ್ಯಕ್ಷಪಡಿಸಿ ವಜ್ರದಂತನ ಮುಂದೆ ನಿಲ್ಲಿಸಿದನು. ಆದರೆ ವಜ್ರದಂತನ ಕಣ್ಣಿಗೆ ಯಾವುದೂ ಕಾಣಲಿಲ್ಲ. ಆಗ ಬ್ರಹ್ಮನು ಅವನಿಗೆ ಸೂಕ್ಷ್ಮದರ್ಶನ ದೃಷ್ಟಿಯನ್ನು ಕೊಟ್ಟನು. ಆ ವಿಘ್ನವು ಸಾಧಾರಣ ಕಣ್ಣಿಗೆ ಕಾಣದಂತೆ ಕಠ್ರುಗಿನ ಸೂಕ್ಷ್ಮಕ್ರಿಮಿಯ ರೂಪದಲ್ಲಿತ್ತು.

ಆ ಕ್ರಿಮಿಯನ್ನು ನೋಡಿ ಮೂಷಿಕಾಸುರನು ಆಶ್ಚರ್ಯಪಡುತ್ತ, "ಇದೇನಿದು ? ಇಷ್ಟು ಸಣ್ಣ ಅಣು ಕ್ರಿಮಿಯನ್ನು ನಾನೇನು ಮಾಡಲಿ ?" ಎಂದನು.

ಬ್ರಹ್ಮನು ನಗೆಯಾಡಿ, "ವಿಘ್ನವೆಂದರೆ ಮಹಾ ಭೂತದ ಹಾಗೆ ಇರುತ್ತದೆಂದುಕೊಂಡೆಯೇನು ? ಅಸಲು ವಿಘ್ನವೆಂದರೆ ಬೀಜರೂಪದಲ್ಲಿರುವ ಸೂಕ್ಷ್ಮಾಣುವೇ. ಸೂಕ್ಷ್ಮ ಕ್ರಿಮಿಗಳಿಂದ ಭಯಂಕರ ವ್ಯಾಧಿಗಳು ವ್ಯಾಪಿಸುವ ಹಾಗೆ ಅನರ್ಥದಾಯಕವಾದ ವಿಘ್ನ ಕಾರಣವು ಎಷ್ಟೇ ಚಿಕ್ಕದಾದರೂ ಎಂತಹ ಭೀಷಣಾಕೃತಿಯನ್ನಾದರೂ ಧರಿಸಿ ಅನರ್ಥವನ್ನುಂಟುಮಾಡುವುದೇ ಅದರ ಕೆಲಸ. ನೀನು ಕೇಳಿದ ವರವನ್ನೇ ಕೊಟ್ಟಿದ್ದೇನೆ. ಏನು ಮಾಡುವಿಯೋ ಮಾಡಿಕೋ" ಎಂದು ಹೇಳಿ ಅಂತರ್ಧಾನನಾದನು.

ಆಮೇಲೆ ಮೂಷಿಕಾಸುರನು ವಿಘ್ನೇಶ್ವರನ ಮೇಲೆ ಹಗೆ ತೊಟ್ಟವನಾಗಿ ಆ ವಿಘ್ನಾಣುವನ್ನು



ನೋಡಿ "ಎಲೋ ವಿಘ್ನ ಕೀಟಕಾ ! ನೀನು ಗಜಾಸುರನ ರೂಪದಲ್ಲಿ ಹೋಗಿ ಕೈಲಾಸದಲ್ಲಿರುವ ವಿಘ್ನೇಶ್ವರನನ್ನು ನಾಶಮಾಡಿ ಬಾ" ಎಂದು ಆಜ್ಞೆ ಮಾಡಿದನು.

ಕೂಡಲೇ ವಿಘ್ನಕೀಟವು ಕಪ್ಪಾದ ದೊಡ್ಡ ಶರೀರವಾಗಿ ಮಾರ್ಪಟ್ಟಿತು. ದಪ್ಪ ಕಾಲುಗಳಿಂದ, ಚಿಕ್ಕ ತಲೆಯಿಂದ ಬೆಂಕಿಯ ಕಿಡಿಗಳಂತಹ ಕಣ್ಣುಗಳಿಂದ ಕದಲುವ ಗುಡ್ಡದಂತೆ ಭಯಂಕರವಾಗಿತ್ತು ಆ ಗಜಾಸುರನ ರೂಪ. ಆನೆಯ ಸೊಂಡಿಲಿನಂತಿತ್ತು ಅವನ ಮೂಗು. ಅಂತಹ ವಿಲಕ್ಷಣ ರೂಪದ ರಾಕ್ಷಸನು ಕತ್ತಿ ಝಳಪಿಸಿಕೊಂಡು ಆಕಾಶಕ್ಕೆ ಹಾರಿ ಹೊರಟು ಹೋದನು.

ಕೈಲಾಸದಲ್ಲಿ ವಿಘ್ನೇಶ್ವರನು ತಂದೆ ತಾಯಿಯರ ಪ್ರೀತಿಯ ಮಗನಾಗಿ ಬೆಳೆದು, ಆಮೇಲೆ ತಂದೆ ತಾಯಿಯರ ಅನುಮತಿಯಿಂದ, ತಾನು ಹುಟ್ಟಿದ ವಿಶ್ವಕರ್ಮ ನಿರ್ಮಿಸಿದ ಭವನಕ್ಕೆ ಹೋದನು.



ಆಗ ಅವನ ಇದಿರಾಗಿ ಮನ್ಮಥನು ತನ್ನ ಕಡೆಗೇ ಬರುವುದನ್ನು ನೋಡಿದನು. ಅವನೀಗ ಅನಂಗನಾಗಿಲ್ಲ.

ವಿಘ್ನೇಶ್ವರನು ಆಶ್ಚರ್ಯದಿಂದ, "ಇದೇನಯ್ಯಾ? ಅನಂಗನಾಗಿ ಕಣ್ಣಿಗೆ ಕಾಣದ ನೀನು ಹೀಗೆ ಕಾಣುವಿಯಲ್ಲಾ ? ಏನು ವಿಶೇಷ ? ನನ್ನ ಮೇಲೆ ನಿನ್ನ ಬಿಲ್ಲು ವಿದ್ಯೆ ತೋರಿಸಿ ಬಿಡಬೇಡ ಸದ್ಯ ! ಇನ್ನೂ ಹುಡುಗ ನಾನು !" ಎಂದನು.

ಮನ್ಮಥನು ವಿನಯದಿಂದ ತಲೆ ತಗ್ಗಿಸಿ "ಗಜೇಂದ್ರಾನನಾ ! ನೀನು ನನ್ನ ಬಾಣಗಳಿಗೆ ಅತೀತನಾದವನು. ನಾನು ಮನಸ್ಸು ಬಂದರೆ ಕಾಣಬೇಕಾದವರಿಗೆ ಕಾಣುವೆನೆಂದು ಶಿವನೇ ವರ ಕೊಟ್ಟಿದ್ದಾನಷ್ಟೆ ? ನಮ್ಮಿಬ್ಬರೊಳಗೆ ಒಂದು ಹೋಲಿಕೆ ಇರುವುದರಿಂದಲೇ ನಿನಗೆ ಕಾಣಿಸುತ್ತಿದ್ದೇನೆ ಅಷ್ಟೇ. ಹೇಳುತ್ತೇನೆ ಕೇಳು, ನೀನು ನಂದಿ ವಾಹನನಾದ ಹರನ ಮಗನಾದರೆ ನಾನು ಪಕ್ಷೀಂದ್ರನನ್ನೇರುವ ಹರಿಯ ಕುಮಾರ. ನನ್ನನ್ನು ಶಿವನು ದಹಿಸಿ ಬದುಕಿಸಿದ್ದಾನೆ. ನಿನ್ನನ್ನು ಸಹಾ ಕಡಿದು ಬದುಕಿಸಿದ್ದಾನೆ. ನನ್ನ ವಾಹನವು ಗಿಳಿಯಾದರೆ ನಿನ್ನ ವಾಹನವು ಇಲಿ. ಮನಸ್ಸನ್ನು ಚಲಿಸುವಂತಹ ಹೂವಿನ ಬಾಣಗಳು ನನ್ನವಾದರೆ, ಮನಸ್ಸನ್ನು ನಿಗ್ರಹಿಸುವ ಪಾಶಾಂಕುಶಗಳು ನಿನ್ನ ಆಯುಧಗಳು. ಇನ್ನು ನಿನಗೆ ತಮ್ಮನು ಹುಟ್ಟಬೇಕಲ್ಲವೇ ? ಪಾರ್ವತೀ ಪರಮೇಶ್ವರರ ಪರಸ್ಪರ ಅನುರಾಗದ ತೇಜಸ್ಸೇ ನಿನ್ನ ತಮ್ಮನಾಗಿ ಕುಮಾರಸ್ವಾಮಿಯಾಗಿ ಅವತರಿಸಬೇಕು. ಆಮೇಲೆ ಎಲ್ಲರೂ ಕಾಯುತ್ತಿರುವ ತಾರಕಾಸುರನ ಸಂಹಾರವಾಗಬೇಕು. ಅದಕ್ಕಾಗಿ ತಾನೇ ದೇವತೆಗಳು ನಾನು ಬೂದಿಯಾಗುವ ಹಾಗೆ ಮಾಡಿದರು? ಉಳಿದಿರುವ ಆ ಕೆಲಸ ಮುಗಿಸಲಿಕ್ಕಾಗಿಯೇ ಕೈಲಾಸಕ್ಕೆ ಬಂದೆನು. ಮೊದಲು ನಿನ್ನ ಪೂಜೆಯಾಗಬೇಕಷ್ಟೆ ? ಅನುಮತಿ ಕೊಡು ವಿಘ್ನೇಶಾ" ಎಂದನು ಮನ್ಮಥ.

ವಿಘ್ನೇಶ್ವರನು "ಹೌದೌದು. ನಾನು ಕೂಡಾ ಅದಕ್ಕಾಗಿಯೇ ಹೊರಟಿದ್ದೇನೆ. ನಿನ್ನ ಕೆಲಸ ನಿರ್ವಿಘ್ನವಾಗಿ ನೆರವೇರುತ್ತದೆ. ಜಯವಾಗಲಿ !" ಎಂದನು.

ಮನ್ಮಥನು ಅದೃಶ್ಯನಾಗಿ ಪಾರ್ವತೀ ಪರಮೇಶ್ವರರಿರುವ ಕೈಲಾಸ ಮಂಟಪದೊಳಗೆ ಸೇರಿಕೊಂಡನು.

ವಿಘ್ನೇಶ್ವರನು ತನ್ನ ವಿಶ್ವಕರ್ಮ ನಿರ್ಮಿತವಾದ ಭವನದೊಳಗೆ ಹೋಗಿ ಸಿಂಹದ್ವಾರದ ಪಕ್ಕದಲ್ಲಿರುವ ಚಂದ್ರಶಿಲಾ ವೇದಿಕೆಯ ಮೇಲೆ ಚೆಂದಾಗಿ ಕುಳಿತು, ಪರಿಸರದಲ್ಲಿರುವ ಪ್ರಕೃತಿ ಸೌಂದರ್ಯವನ್ನು ಆನಂದದಿಂದ ನೋಡತೊಡಗಿದನು. ಮಿರಿಮಿರಿ ಹೊಳೆಯುವ ಹಿಮಗಿರಿಯ ಶಿಖರಗಳಲ್ಲಿ ಸಂಧ್ಯಾಕಾಂತಿ ಥಳಥಳಿಸುತ್ತಿದ್ದಿತು. ಹಿಮಾಲಯದ ಜಲಪಾತಗಳು ಮಂದ್ರ ಗಂಭೀರವಾಗಿ ಸರಿಗಮಗಳಂತೆ ಧ್ವನಿಸುತ್ತಿದ್ದುವು. ಅಂತಹ ಪ್ರಶಾಂತ ಸಮಯದಲ್ಲಿ ಇದ್ದಕ್ಕಿದ್ದ "ಹಾಗೆ ವಿಘ್ನೇಶ್ವರನೆಂಬವನು ಎಲ್ಲಿದ್ದಾನೆ ?" ಎಂಬ

ಭೀಕರ ಗರ್ಜನೆ ದಿಕ್ಕುಗಳು ಮಾರ್ಮೊಳಗುವಂತೆ ಆಕಾಶದ ಕಡೆಯಿಂದ ಕೇಳಿಸಿತು.

ಮಹಾ ಗಜಾಸುರನ ರೂಪದಲ್ಲಿರುವ ವಿಘ್ನನು ವಿಘ್ನೇಶ್ವರನ ಮುಂದೆ ಧುತ್ತೆಂದು ಧುಮುಕಿ ನಿಂತನು. ಅವನ ಹೆಜ್ಜೆಗಳಿಂದ ನೆಲವೇ ಕಂಪಿಸಿತು. ಗಜಾಸುರನು ವಿಘ್ನೇಶ್ವರನನ್ನು ನೋಡಿ, "ಇಲ್ಲೆಲ್ಲೋ ವಿಘ್ನೇಶ್ವರನಿದ್ದಾನಂತೆ? ನೀನೇನಾ? ನೋಡಿದರೆ ಹಾಗೇ ಕಾಣುವಿ! ನಾನು ಗಜಕಾಯನಾದ ವಿಘ್ನ! ನೀನು ಗಜಮುಖನಾದ ವಿಘ್ನೇಶ್ವರನಾದರೆ ಸಾಯಲು ಸಿದ್ಧನಾಗು! ಹುಂ!" ಎಂದು ಬಂಡೆಗಳು ನಡುಗುವಂತೆ ಗುಡುಗಿದನು.

ವಿಘ್ನೇಶ್ವರನು ಕಿವುಡನ ಹಾಗೆ, ಒಂದೂ ಅರ್ಥವಾಗದವನಂತೆ ನೋಡುತ್ತ "ಅಪ್ಪಾ, ಕಬ್ಬಿನ ಕೋಲನ್ನು ತುಂಡು ತುಂಡು ಮಾಡಿ ತಿನ್ನಬೇಕೆನಿಸುತ್ತದೆ. ನನ್ನ ಕೊಡಲಿಯನ್ನು ಸ್ವಲ್ಪ ಹರಿತ ಮಾಡಿ ಕೊಟ್ಟರೆ, ನಿನಗೂ ತಿನ್ನಲು ಉಂಡೆಗಳನ್ನು ಕೊಡುತ್ತೇನೆ" ಎಂದು ತನ್ನ ಕೈಯಲ್ಲಿದ್ದ ಕೊಡಲಿಯನ್ನು ಅವನ ಕಡೆಗೆ ಬಿಸುಟನು.

ಗಜಾಸುರನ ಕಾಲುಗಳೆರಡೂ ತುಂಡಾಗಿ, ಪರ್ವತದ ಹಾಗೆ ಹೊರಳಿ ಬಿದ್ದನು. ಬಿದ್ದವನ ಮೇಲೆ ವಿಘ್ನೇಶ್ವರನು ಹಾರಿ ತಾಂಡವ ಮರ್ದನ ಮಾಡುತ್ತಿರಲು "ಓ ಮಹಾ ಪ್ರಭೂ! ನಾನು ವಿಘ್ನನು. ಬ್ರಹ್ಮನಿಂದ ಸೃಷ್ಟಿಯಾದವನು. ಅವನು ಕೊಟ್ಟ ವರದ ಉಪಯೋಗದಂತೆ ಮಹಾ ಗಜಾಸುರನ ರೂಪದಲ್ಲಿ ಬಂದೆ. ತಕ್ಕ ಫಲ ಸಿಕ್ಕಿತು!" ಎಂದು ವಿಘ್ನನು ಕಿರುಚಿದನು.

"ನಾನು ವಿಘ್ನ ವಿನಾಶಕನು. ಅದಲ್ಲದೆ ಈಗ ನೀನು ಮಾಯಾ ರೂಪದಲ್ಲಿ ಬಂದವನು. ಗಜಾಸುರನೆನಿಸಿದ್ದೀಯಾ! ನಿನ್ನನ್ನು ಚೂರು ಚೂರು ಮಾಡದೆ ಉಳಿಗಾಲವಿಲ್ಲ. ನಿನ್ನ ತುಣುಕುಗಳು ನನಗೆ ಮೋಸಪಡಿಸುವವರನ್ನಷ್ಟೇ ಪೀಡಿಸುತ್ತವೆ. ನೀನು ಕಾಳೀಯ ನಾಗನಾಗಿ ಕಾಳೀಯ ಮಡುವಿನಲ್ಲಿ ಅಡಗಿಕೊಂಡಿರು. ಬಾಲಕೃಷ್ಣನು ನಿನ್ನನ್ನು ಇನ್ನೂ ಮರ್ದಿಸುತ್ತಾನೆ. ಅವನ ಪಾದಗಳು ನಿನ್ನ ತಲೆಗಳ ಮೇಲೆ ಬಿದ್ದು ನಿನ್ನ ಪಾಪಪರಿಹಾರವಾಗ ಬೇಕಷ್ಟೇ. ಆಮೇಲೆ ಸರ್ಪ ಜಾತಿಗಳ ಹೆಡೆಗಳಲ್ಲಿ ವಿಷ್ಣುಪಾದ ಮುದ್ರೆಗಳು ಉಂಟಾಗಿ ಅವುಗಳಿಗೊಂದು ನೆನಪೂ ಆಗಬೇಕು. ಅಲಂಕಾರವೂ ಆಗಬೇಕು. ನಡೆ!" ಎಂದು ಹೇಳಿ ವಿಘ್ನನನ್ನು ಛಿನ್ನಾಭಿನ್ನಮಾಡಿ ಓಡಿಸಿದನು. ಆ ವಿಘ್ನರೇಣುಗಳು ಎಲ್ಲೆಲ್ಲೂ ವ್ಯಾಪಿಸಿ ಅದೃಶ್ಯವಾದುವು. ಅಸಲು ವಿಘ್ನನು ಅಣುರೂಪದಲ್ಲೇ ಉಳಿದನು. ಈ ಅದ್ಭುತ ದರ್ಶನದಿಂದ ದೇವತೆಗಳು ಜಯಜಯವೆನ್ನುತ್ತ, ವಿಘ್ನೇಶ್ವರನ ಮೇಲೆ ಪುಷ್ಪವೃಷ್ಟಿಗರೆದರು.






೫

**ಜೀ**ನಾಬ್ ಕಿರುನಗೆಯನ್ನು ಸೂಸುತ್ತ, "ಓಹೊ! ಅದಕ್ಕೇನೂ ಕಡಿಮೆಯಾಗದು. ನನ್ನ ಮಿತ್ರರಾದ ಆ ದೊಡ್ಡ ಮನುಷ್ಯರೆಂದರೆ ಪಾನಭಾಂಡಗಳಂಥವರೇ. ಕಡಿಮೆ ಬಿದ್ದರೆ ತರಿಸಿಕೊಡಲೂ ಬೇಕಾದೀತು" ಎಂದಳು.

"ಭೇಷ್ಟಾಗಿ ತರಿಸುವಾ, ಅದಕ್ಕೇನಂತೆ" ಎಂದು ಹಾಜ್ ಕರೀಂ ದೊಡ್ಡದಾಗಿ ಬಾಯಿ ತೆರೆದು ನಕ್ಕನು. ಜೀನಾಬ್ ತನ್ನ ಮನೆಗೆ ಹೋಗಿ, ಒರಗುದಿಂಬು, ಸುಖಾಸನ, ಮೇಜು, ತಟ್ಟೆ ಲೋಟೆ ಮೊದಲಾದ ಸೊಗಸು ಸಾಮಾನುಗಳನ್ನು, ಸಾಗಿಸಿಕೊಂಡು ಸಾರಾಯಿ ಖಾನೆಗೆ ಹಿಂದಿರುಗಿ ಬಂದು ವಿಶಾಲವಾದ ದಿವಾಣ ಖಾನೆಯಲ್ಲಿ ಓರಣವಾಗಿರಿಸಿ, ಬಾಗಿಲಲ್ಲೇ ನಿಂತಳು.

ಸ್ವಲ್ಪ ಹೊತ್ತಿನ ಮೇಲೆ ಗೂನಿ ಅಲಿಯೂ, ಅವನೊಂದಿಗೆ ಒಂಬತ್ತು ಮಂದಿ ವೀರಭಟರೂ ಜೋರಿನಿಂದ ಮಾತಾಡಿಕೊಳ್ಳುತ್ತ ಅಲ್ಲಿಗೆ ಬಂದರು. ಜೀನಾಬ್ ಗೂನೀ ಅಲೀಗೆ ಬಗ್ಗಿ ಸಲಾಂ ಹೇಳಿ, "ನೀವೇನಾ ಅಹ್ಮದ್?" ಎಂದು ಕೇಳಿದಳು.

"ಅಲ್ಲ. ನನ್ನ ಹೆಸರು ಅಲೀ ಬಹದ್ದೂರ್!" ಎಂದನು ಅಲೀ ಆವಳ ಮುಖನೋಡಿ ನಗುತ್ತ. "ಚಿಂತಿಲ್ಲ. ನೀವೆಲ್ಲಾ ಇಂದು ನನ್ನ ಆತಿಥ್ಯ ಸ್ವೀಕರಿಸಬೇಕು. ತಯಾರಾಗಿದೆ, ಸ್ವೀಕರಿಸಿರಿ" ಎಂದು ಜೀನಾಬ್ ಅವರನ್ನು ಒಳಗಿನ ಕೋಣೆಗೆ ಕರೆದೊಯ್ದಳು. ಅವರೆಲ್ಲರೂ ಅತ್ಯುತ್ಸಾಹದಿಂದ ಸಾರಾಯಿ ಪೀಪಾಯಿಗಳ ಸುತ್ತಲೂ ಕುಳಿತು, ಸ್ವೇಚ್ಛೆಯಾಗಿ ತಿಂದೂ ಕುಡಿದೂ ಆನಂದಿಸಲು ತೊಡಗಿದರು. ಸಾರಾಯಿಯಲ್ಲಿ ಜೀನಾಬ್ ಧಂಡಿಯಾಗಿ ಭಂಗಿ ಬೆರೆಸಿದ್ದುದರಿಂದ ಬೇಗದಲ್ಲಿಯೇ ಆ ಹತ್ತುಮಂದಿಗಳಿಗೂ ಬೋಧ ತಪ್ಪಿ ಅಲ್ಲಲ್ಲಿ ಬಿದ್ದರು. ಜೀನಾಬ್ ಹಾಗೆ ಬಿದ್ದ ಒಬ್ಬೊಬ್ಬರನ್ನೇ ಕಾಲು ಹಿಡಿದು ಎಳೆದು ಆ ಸಾರಾಯಿ ಖಾನೆಯ ಹಿಂದಿನ ಕಸಗಪ್ಪು ವಠಾರಕ್ಕೆ ಒಯ್ದು, ಒಬ್ಬರ ಮೇಲೆ ಒಬ್ಬರನ್ನು ಪೇರಿಸಿ, ದೊಡ್ಡ ಬಟ್ಟೆಯನ್ನು ಅವರ ಮೇಲೆ ಮುಚ್ಚಿ, ದಿವಾಣ ಖಾನೆಯನ್ನು ಶುಭ್ರಗೊಳಿಸಿ ಮತ್ತೆ ತಲೆ ಬಾಗಿಲ ಹತ್ತಿರ ನಿಂತಳು. ಸ್ವಲ್ಪ ಹೊತ್ತಿಗೆ ಮತ್ತೊಂದು ಹತ್ತುಮಂದಿ

ಅಹ್ಮದನ ಭಟರು ಅಲ್ಲಿಗೆ ಬಂದರು. ಜೀನಾಬ್ ಅವರನ್ನು ಕೂಡಾ ನಗುನಗುತ್ತ ಆಹ್ವಾನಿಸಿ, ಕುಡಿಸಿ ಮತ್ತೇರಿಸಿ, ಮೊದಲಿನವರಿಗೆ ಮಾಡಿದ ಹಾಗೆಯೇ ಹಿಂಗಡೆಗೆ ಎಳೆದೊಯ್ದು ಪೇರಿಸಿಟ್ಟು ಬಟ್ಟೆ ಮುಚ್ಚಿದಳು. ಬೇಗದಲ್ಲೇ ಅಹ್ಮದನ ನಲುವತ್ತು ಮಂದಿ ಭಟರಿಗೂ ಅದೇ ಗತಿಯಾಯಿತು, ನಾಲ್ಕು ದಿಕ್ಕುಗಳಲ್ಲಿ ಶೋಧಮಾಡಿ ಬಂದವರ ಗತಿ ಹಾಗಾದ ಸ್ವಲ್ಪ ಹೊತ್ತಿನ ಮೇಲೆ, ಕುದುರೆಯ ಮೇಲೇರಿ ಕೊಂಡು ಅಹ್ಮದ್ ಕೂಡಾ ಅಲ್ಲಿಗೇ ಬಂದನು. ಬಾಗಿಲಲ್ಲಿ ನಿಂತ ಜೀನಾಬಳನ್ನು ನೋಡಿ, "ಏಯ್, ಥೋಕ್ರೀ ! ನನ್ನ ಭಟರಾರಾದರೂ ಇಲ್ಲಿಗೆ ಬಂದರೇ ? ನೋಡಿದಿಯಾ ?" ಎಂದು ಜೋರಾಗಿ ಕೇಳಿದನು.

"ತಾವೇನಾ ಕೋತ್ವಾಲ್ ಅಹ್ಮದರು ? ಹಾಗಾದರೆ ಬನ್ನಿ ಬನ್ನಿ. ತಮ್ಮ ಭಟರು ಈ ಬೀದಿಯ ಕೊನೆಯಲ್ಲಿ ಯಾವಳೋ ಮುದುಕಿಯನ್ನು ನೋಡಿದ ರಂತೆ. ಅವಳನ್ನು ಹಿಡಿಯಲು ಹೋದೆವೆಂದು ತಮ್ಮೊಡನೆ ಹೇಳಲು ಹೇಳಿದ್ದಾರೆ. ಅವರು ಅವಳನ್ನು ಹಿಡಿದುಕೊಂಡು ಬರುವುದರೊಳಗೆ ತಾವು ದಯ ಮಾಡಿ ನನ್ನ ಆತಿಥ್ಯ ಸ್ವೀಕರಿಸಬೇಕು. ಬನ್ನಿ ಹೀಗೆ !" ಎಂದಳು ಜೀನಾಬ್.

ಅಹ್ಮದ್ ಪರಮಾನಂದದಿಂದ, ಒಳಗೆ ಹೋಗಿ ತಿನ್ನಲೂ ಕುಡಿಯಲೂ ಪ್ರಾರಂಭಿಸಿ, ಭಂಗಿಯ ಪ್ರಭಾವದಿಂದ ಬೋಧ ಕಳೆದುಕೊಂಡು ಒರಗಿ ಹೊರಳಿ ಬಿದ್ದನು. ಜೀನಾಬ್ ಅವನನ್ನು ಕಸಗಪ್ಪಿನ ವಠಾರಕ್ಕೆ ಸೇರಿಸಿ, ಅವನ ಶರೀರದಲ್ಲಿ ತುಂಡಂಗಿ, ಚಡ್ಡಿಗಳ ಹೊರತು ಉಳಿದ ದುಸ್ತುಗಳನ್ನೂ, ಆಭರಣಗಳನ್ನೂ ಅಪಹರಿಸಿಕೊಂಡಳು. ಉಳಿದ ನಲುವತ್ತು ಮಂದಿ ಭಟರನ್ನೂ ಹಾಗೆಯೇ ಮಾಡಿದಳು. ಅವರೆಲ್ಲರಿಂದ ದೋಚಿಕೊಂಡ ದುಸ್ತು ವಸ್ತುಗಳನ್ನೆಲ್ಲಾ ಅಹ್ಮದನ ಕುದುರೆಯ ಮೇಲೆ ಹಾಕಿಕೊಂಡು, ನೇರಾಗಿ ತನ್ನ ಮನೆಗೆ ಹೋಗಿ ಸೇರಿದಳು. ಅಹ್ಮದ್ ಮತ್ತು ನಲುವತ್ತು ಮಂದಿ ಭಟರೂ ಎರಡು ಹಗಲೂ ಎರಡು ರಾತ್ರಿಯೂ ನಿದ್ದೆಯಲಿದ್ದು ಮೂರನೇ ದಿನ ಬೆಳಿಗ್ಗೆ ಎಚ್ಚೆತ್ತರು. ಮೊದಲು



ಅವರಿಗೆ ತಾವು ಎಲ್ಲಿರುವೆವೆಂಬುದೇ ಗೊತ್ತಾಗಲಿಲ್ಲ. ಆದರೆ ಕ್ರಮವಾಗಿ ಸ್ಮೃತಿ ಬರುತ್ತಿದ್ದಂತೆ, ತಮಗೆ ನಡೆದ ಘೋರವಾದ ಅವಮಾನವು ಅರ್ಥವಾಗಿ ತಾಳಲಾಗದಷ್ಟು ನಾಚಿಗೆಯುಂಟಾಯಿತು. ದುಸ್ತುಗಳೇನೂ ಇಲ್ಲದೆ ಬೀದಿಯಲ್ಲಿ ಹೇಗೆ ಹೋಗುವುದೆಂದು ಅಹ್ಮದನಿಗೆ ಗೊತ್ತಾಗಲಿಲ್ಲ. ಹೋಗದಿರಲೂ ಸಾಧ್ಯವಿಲ್ಲ. ಕಡೆಗೆ ತುಂಡಂಗಿ ಚಡ್ಡಿಗಳೊಂದಿಗೆ ಅಹ್ಮದ್ ಮುಂದೆ ಹೊರಟನು. ಅವನ ಹಿಂದೆ ನಲುವತ್ತು ಮಂದಿ ಭಟರೂ ಬೀದಿಗೆ ಬಿದ್ದರು.

ಇನ್ನೂ ಅಹ್ಮದನ ಅದೃಷ್ಟ ಚೆನ್ನಾದಂತಿಲ್ಲ. ಸ್ವಲ್ಪ ದೂರ ಹೋಗುವಷ್ಟರಲ್ಲಿ ಹಸನ್ ಅವನಿಗೆ ಇದಿರಾಗಿ ಬರುತ್ತ, "ಇದೇನಿದೂ ಅಹ್ಮದ್ ? ಈ ಚಳಿಗಾಳಿಗೆ ಮೈಬಿಟ್ಟು ತಿರುಗುವುದು ಆರೋಗ್ಯಕ್ಕೆ ಒಳ್ಳೇದೆಂದು ಕೊಂಡೆಯಾ ?" ಎಂದು ಪ್ರಶ್ನಿಸಿದನು.

"ವಿಧಿ ! ಎಂಥವರಿಗೂ ವಿಧಿ ತಪ್ಪದಯ್ಯಾ ಹಸನ್ ! ಒಬ್ಬಳು ಹುಡುಗಿ ನನ್ನನ್ನು ಮೋಸಪಡಿಬಿಟ್ಟಳು. ಅವಳು ಯಾರೋ ಗೊತ್ತಾಗಿಲ್ಲ. ಮಹಾ ದಗಲಬಾಜೀ ಹುಡುಗಿ, ಗೊತ್ತೇನು ?" ಎಂದ ಅಹ್ಮದ್ ದೀನನಾಗಿ.

"ಓಹ್ ! ಅವಳೋ ! ಅವಳೂ ಗೊತ್ತು, ಅವಳಮ್ಮನೂ ಗೊತ್ತು ! ಹಿಡಿದು ಕೊಡಲೇನು ?" ಎಂದು ಕೇಳಿದ ಹಸನ್, "ಅದು ಹೇಗೆ ಸಾಧ್ಯ?" ಎಂದು ಆಶ್ಚರ್ಯದಿಂದ ಕೇಳಿದ ಅಹ್ಮದ್.

"ಅದಕ್ಕೇನೂ ಕಷ್ಟವಿಲ್ಲ, ನೀನು ಸೀದಾ ಖಲೀಫರ ಬಳಿಗೆ ಹೋಗಿ ಈ ಕಾರ್ಯ ನಿನ್ನಿಂದಾಗುವುದಿಲ್ಲವೆಂದು ಹೇಳಿಬಿಡು. ಅದನ್ನು ಕೇಳಿ ಖಲೀಫರಿಗೆ ಸಿಟ್ಟು ಬಂದೀತು. ಆ ಕಾರ್ಯ ಸಾಧಿಸುವಂಥವನನ್ನು ಕರೆ ತಂದಿದ್ದೇನೆಂದು ನನ್ನ ಹೆಸರು ಹೇಳಿ ಬಿಡು. ಆಮೇಲೆ ನಾನು ನೋಡಿಕೊಳ್ಳುತ್ತೇನೆ" ಎಂದನು ಹಸನ್. ಅಹ್ಮದ್ ಖಲೀಫನ ಸನ್ನಿಧಿಗೆ ಹೋಗಿ ಅವನು ಹೇಳಿದ ಹಾಗೆಯೇ ಮಾಡಿದನು. ಕೂಡಲೇ ಖಲೀಫನು ಹಸನ್ನನ್ನು ಕರೆಯಿಸಿ "ನೀನು ಆ ಕಳ್ಳ ಮುದುಕಿಯನ್ನು ಹಿಡಿದು ತರುವಿಯಾ ? ಸಾಧ್ಯವೇ ?" ಎಂದು ಕೇಳಿದನು.





"ಅವಳು ಯಾರೆಂದು ನನಗೆ ಗೊತ್ತಾಗಿದೆ. ಅವಳು ಧನ ಲೋಭದಿಂದ ಈ ಕಳ್ಳತನಗಳನ್ನು ಮಾಡಿದಂತೆ ಕಾಣುವುದಿಲ್ಲ. ತನ್ನ ಪ್ರತಾಪವನ್ನು ತಮ್ಮ ಮಹಾಸನ್ನಿಧಿಗೆ ತೋರಿಸಲಿಕ್ಕಾಗಿಯೇ ಹೀಗೆ ಮಾಡಿರಬೇಕು, ಅವಳು ಕಳ್ಳತನ ಮಾಡಿದ ಸೊತ್ತುಗಳನ್ನೆಲ್ಲಾ ಹಿಂದಿರುಗಿ ಒಪ್ಪಿಸುವ ಷರತ್ತಿನ ಮೇಲೆ, ಅವಳಿಗೆ ತಾವು ಅಭಯ ಕೊಡುವ ಕೃಪೆ ದೋರಿದ ಪಕ್ಷದಲ್ಲಿ ಅವಳನ್ನು ಕರೆದು ತಂದು ಸನ್ನಿಧಾನದ ಇದಿರು ನಿಲ್ಲಿಸಬಲ್ಲೆನು" ಎಂದನು ಹಸನ್.

ಖಲೀಫನು ಹಾಗೆಯೇ ಅಭಯದಾನ ಮಾಡಿದನು. ಹಸನ್ ನೇರಾಗಿ ದಿಲ್ಲೈಲಾಳ ಮನೆಗೇ ಹೋಗಿ ಬಾಗಿಲು ತಟ್ಟಲು, ಜೀನಾಬ್ ಬಾಗಿಲು ತೆರೆದಳು, "ನಿನ್ನ ಅಮ್ಮನನ್ನು ಖಲೀಫರು ಬರಹೇಳಿದ್ದಾರೆಂದು ಹೇಳು. ಅವರಿಂದ ಅಭಯುವನ್ನು ತಂದಿದ್ದೇನೆ. ನಿನ್ನ ಅಮ್ಮ ಅಪಹರಿಸಿ ತಂದ ಸಾಮಾನುಗಳನ್ನೆಲ್ಲಾ ಕುದುರೆಗಳ ಮೇಲೆ ಹಾಕಿಸು" ಎಂದನು ಹಸನ್.

ಮಗಳಿಂದ ಈ ಸಮಾಚಾರ ತಿಳಿದು, ದಿಲ್ಲೈಲಾ ಉಪ್ಪರಿಗೆಯಿಂದ ಇಳಿದು ಬಂದಳು. ಅವಳು ಅದುವರೆಗೆ ಅಪಹರಿಸಿದ ವಸ್ತುಸಾಮಗ್ರಿಗಳನ್ನೆಲ್ಲಾ ಕುದುರೆಗಳ ಮೇಲೆ ಏರಿಸಲಾಯಿತು. ದಿಲ್ಲೈಲಾ ತನಗಿರುವುದರಲ್ಲಿ ಒಳ್ಳೆಯ ಬಟ್ಟೆಗಳನ್ನು ಧರಿಸಿ ಕೊಂಡು ಖಲೀಫನ ದರ್ಶನಕ್ಕೆ ಸಿದ್ಧಳಾದಳು.

"ನೀನು ದೋಚಿಕೊಂಡದ್ದೆಲ್ಲವೂ ಬಂದುವೇ ?" ಎಂದು ಕೇಳಿದನು ಹಸನ್.

"ಅಹ್ಮದ್ ಮತ್ತು ಅವನ ನಲುವತ್ತು ಮಂದಿ ಭಟರ ದುಸ್ತುಗಳ ಹೊರತು ಉಳಿದುವನ್ನೆಲ್ಲಾ ಕುದುರೆಗಳ ಮೇಲೆ ಏರಿಸಿದ್ದೇನೆ. ಸದ್ಯ ಇಷ್ಟು ಸಾಕು. ನಿಜಕ್ಕೂ ಹೇಳುತ್ತೇನೆ. ಕಳ್ಳತನಕ್ಕೂ ನನಗೂ ಯಾವ ಸಂಬಂಧವೂ ಇಲ್ಲ" ಎಂದಳು ದಿಲ್ಲೈಲಾ.

"ಹೌದೌದು. ಅದು ಇನ್ನೊಬ್ಬರ ಸಂಬಂಧದ್ದು" ಎಂದು ಹಸನ್ ನಕ್ಕನು. ಆಮೇಲೆ ಅವರಿಬ್ಬರೂ ಖಲೀಫನ ದರ್ಬಾರಿಗೆ ಹೋದರು.

ಮುದುಕಿಯನ್ನು ನೋಡಿದ ಕೂಡಲೇ ಖಲೀಫನು ಅತ್ಯುಗ್ರನಾಗಿ ಆವೇಶದಿಂದ "ಈ ಕಳ್ಳ ಮುದುಕಿಯ ತಲೆ ಕಡಿದುಬಿಡಿ" ಎಂದು ಅಪ್ಪಣೆ ಮಾಡಿದನು. ಕೂಡಲೇ ಹಸನ್ ಸವಿನಯದಿಂದ ಖಲೀಫನ ಅಭಯ ವಚನವನ್ನು ಜ್ಞಾಪಕಪಡಿಸಲು, ಖಲೀಫನು ಶಾಂತನಾಗಿ ಭಟರಿಗೆ ಬೇಡವೆಂದು ಸನ್ನೆದೋರಿಸಿ, "ನಿನ್ನ ಹೆಸರೇನು ?" ಎಂದು ದಿಲ್ಲೈಲಾಳನ್ನು ಪ್ರಶ್ನಿಸಿದನು.

ದಿಲ್ಲೈಲಾ ವಿನಯದಿಂದ ಬಾಗಿ, "ಈ ಸನ್ನಿಧಾನದ ಅಡಿಯಾಳಾದ ಇವಳು ಪಾರಿವಾಳದ ಅಂಚೆ ಇಲಾಖೆಯನ್ನು ನಡೆಯಿಸಿದ ಅಧಿಕಾರಿಯ ಪತ್ನಿ. ಹೆಸರು ದಿಲ್ಲೈಲಾ" ಎಂದಳು.

"ನೀನು ಬಹಳ ಸಮರ್ಥಳಾಗಿ ಕಾಣುವೆ. ಇವರನ್ನೆಲ್ಲಾ ಏಕೆ ಮೋಸಪಡಿಸಿದೆ ?" ಎಂದು ಖಲೀಫನು ಕೇಳಿದನು. ದಿಲ್ಲೈಲಾ ಖಲೀಫನ ಮುಂದೆ ಮಂಡಿಯೂರಿ ಬಿದ್ದೆದ್ದು, "ಮಹಾಸನ್ನಿಧಾನವು

ಕ್ಷಮಿಸಬೇಕು. ನಾನು ಧನದ ಆಶೆಯಿಂದ ಕಳ್ಳತನಗಳನ್ನು ಮಾಡಿದ್ದೇ ಅಲ್ಲ. ಚೋರಕಾರ್ಯದಲ್ಲಿ ಮಹಾ ಸಮರ್ಥರಾದ ಅಹ್ಮದ್ ಹಸನ್‌ಗಳಿಗೆ ಸನ್ನಿಧಾನವು ದೊಡ್ಡ ಪದವಿಗಳನ್ನು ಕೊಟ್ಟ ಸಮಾಚಾರ ಕೇಳಿ, ನಾನು ಅವರಿಗಿಂತಲೂ ಹೆಚ್ಚು ಶಕ್ತಿಯನ್ನು ತೋರಿಸಿದರೆ, ನನ್ನ ಗಂಡ ಮಾಡಿಕೊಂಡು ಬಂದ ಪಾರಿವಾಳದ ಅಂಚೆ ಇಲಾಖೆಯನ್ನು ನನಗೆ ದಯಮಾಡಿಸುವಿರೇನೋ ಅಂದುಕೊಂಡೆನು" ಎಂದಳು.

ದಿಲ್ಲೈಲಾ ಹೇಳಿದ ಮಾತಿನಲ್ಲಿ ತಥ್ಯವಿರುವಂತೆ ಖಲೀಫನಿಗೆ ತೋರಿತು. ಅವನು ಮೊದಲು ಯಾರು ಯಾರ ಸೊತ್ತುಗಳನ್ನು ಅವರವರಿಗೆ ಕೊಡಿಸುವ ಏರ್ಪಾಡು ಮಾಡಿ, ಆಮೇಲೆ ದಿಲ್ಲೈಲಾಳೊಂದಿಗೆ "ನಿನ್ನ ಅಭಿಲಾಷೆ ಹೇಳು" ಎಂದನು.

"ಆಳುವವರು ಈ ಅಡಿಯಾಳಿನ ಪ್ರಾರ್ಥನೆಯನ್ನು ಲಾಲಿಸಬೇಕು. ನನಗೆ ನನ್ನ ಗಂಡನು ಮಾಡಿದ ಉದ್ಯೋಗವನ್ನೂ, ಸಂಬಳವನ್ನೂ ಕೊಡಿಸುವ ಕೃಪೆ ಮಾಡಬೇಕು. ಆ ಕೆಲಸ ನನಗೆ ಪೂರ್ತಿಯಾಗಿಯೂ ಚೆನ್ನಾಗಿಯೂ ಗೊತ್ತಿದೆ. ನಾನೂ ನನ್ನ ಕುಮಾರಿಯೂ ಕೂಡಿ ಪಾರಿವಾಳಗಳನ್ನು ಸಾಕುತ್ತಿದ್ದೆವು, ಅವುಗಳ ಕಾಲಿಗೆ ಪತ್ರಗಳನ್ನು ಕಟ್ಟಿ, ಆಳುವವರು ನಿಯಮಿಸಿದ ನಲುವತ್ತು ಮಂದಿ ಗುಲಾಮರೊಂದಿಗೆ, ನಲುವತ್ತು ಬೇಟೆನಾಯಿಗಳೊಂದಿಗೆ ಅಂಚೆ ಇಲಾಖೆಯನ್ನು ಸಕ್ರಮವಾಗಿ ನಡೆಸಿಕೊಂಡಿದ್ದವರು ನಾವೇ. ಗಂಡನು ನಮ್ಮ ತನಿಖೀದಾರರಾಗಿದ್ದರು ಅಷ್ಟೇ" ಎಂದಳು ದಿಲ್ಲೈಲಾ.

ಖಲೀಫನು ತಲೆಯೊಲಿದು ಕೂಡಲೇ ಆಜ್ಞಾಪತ್ರವನ್ನು ತಯಾರು ಮಾಡಿಸಿ, ದಿಲ್ಲೈಲಾಳನ್ನು ಪಾರಿವಾಳದ ಅಂಚೆ ಇಲಾಖೆಯ ನಿರ್ವಾಹಕಳಾಗಿ ನಿಯಮಿಸಿ, ನೀಗ್ರೋ ಗುಲಾರನ್ನೂ, ಬೇಟೆನಾಯಿಗಳನ್ನೂ ಅವಳವಶಕ್ಕೆ ಕೊಡಿಸಿದನು.

ದಿಲ್ಲೈಲಾ ಅತ್ಯಂತ ಸಂತೋಷದಿಂದ ಮನೆಗೆ ಹಿಂದಿರುಗಿ, ಮನೆಯಲ್ಲಿದ್ದ ಸಾಮಾನುಗಳನ್ನೆಲ್ಲಾ ಪಾರಿವಾಳದಂಚೇ ಇಲಾಖೆಗೆ ಸಾಗಿಸಿದಳು. ಆ ದಿನವೇ ಅವಳು ಗಂಡು ವೇಷ ಹಾಕಿಕೊಂಡು ತಲೆಯಲ್ಲಿ ಬೆಳ್ಳಿ ಪಾರಿವಾಳವಿರುವ ಬಂಗಾರದ ಟೋಪಿ ಧರಿಸಿ, ಅಂಚೆಗಳ ಸಂದೇಶಗಳನ್ನು ಸ್ವೀಕರಿಸಿ ತರಲು ರಾಜಭವನಕ್ಕೆ ಹೋದಳು. ನಲುವತ್ತು ಮಂದಿ, ನೀಗ್ರೋ ಗುಲಾಮರಿಗೂ ಕೆಂಪು ಜರೀ ದುಸ್ತುಗಳನ್ನು ಕೊಡಿಸಿದಳು. ತನ್ನ ಹೊಸ ಭವನದಲ್ಲಿ ಅಲಂಕಾರವಾಗಿರಲೆಂದುಕೊಂಡು ನಲುವತ್ತು ಆಣಿಗಳನ್ನು ಹೊಡೆಯಿಸಿ, ಅವುಗಳಲ್ಲಿ ಅಹ್ಮದನ ಮತ್ತು ಗೂನಿ ಅಲೀಯ ದುಸ್ತುಗಳನ್ನೂ, ಉಳಿದ ಮೂವತ್ತೊಂಬತ್ತು ಮಂದಿ ಭಟರ ದುಸ್ತುಗಳನ್ನೂ ನೇತಾಡಿಸಿದಳು.

(ಇನ್ನೂ ಇದೆ)



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

ಗೆದ್ದ ಶೀರ್ಷಿಕೆಗಳು ೧೯೮೧ ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



A. L. Syed





K. Vasanthavalli

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಜೂನ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯ್ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಏಪ್ರಿಲ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: ಹೆಚ್ಚು ಕಡಿಮೆಯಾದರೂ ಭಯವೇನಿಲ್ಲ

ಎರಡನೇ ಫೋಟೋ : ಹುಚ್ಚಾಟ ಇದು ಮಾತ್ರ ನಂಬಲಾಗೋಲ್ಲ

ಕಳುಹಿಸಿದವರು : ಹೆಚ್. ವೀಣಾ,

ಸುರತ್ಕಲ್, ಮಂಗಳೂರು, ದ.ಕ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

# A YEARFULL OF READING DELIGHT FROM

WALT DISNEY

IN









HINDI

SOON IN THESE LANGUAGES TOO




MARATHI




BENGALI




GUJARATHI

CHANDAMAMA (Kannada) JUNE 1981 Regd. No. M. 5210